ಕರ್ಣಾಟಕ ಕಾವ್ಯಕಲಾನಿಧಿ. ೧೬

# ನಳಚರಿತ್ರೆ.

( ಭಾಮಿನೀ ಷಟ್ಪದಿ. )

ಎಸ್. ಜಿ. ನರಸಿಂಹಾಚಾರ್,
ಗವರ್ನಮೆಂಟ್ ಕನ್ನಡ ಟ್ರಾನ್ಸ್ಲೇಟರ್, ಎಜುಕೇಷನ್ ಡಿಪಾರ್ಟುಮೆಂಟು ಮೈಸೂರು.

ಮತ್ತು

ಮ. ಆ. ರಾಮಾನುಜೈಯಂಗಾರ್
ಅಸಿಸ್ಟೆಂಟು ಮಾಸ್ಟರ್, ವೆಸ್ಲಿಯನ್ ಹೈಸ್ಕೂಲ್, ಮೈಸೂರು—

ಇವರುಗಳಿಂದ ಪರಿಶೋಧಿಸಲ್ಪಟ್ಟು

ಮೈಸೂರು.
ಜಿ. ಟಿ. ಎ. ಮುದ್ರಾಶಾಲೆಯಲ್ಲಿ ಮುದ್ರಿತವಾಗಿದೆ.

1906

# ನಳಚರಿತ್ರೆ.

( ಭಾಮಿನೀ ಷಟ್ಪದಿ. )

ಶ್ರೀರಮಣ ಸರಸಿಜದಳಾಕ್ಷ ಮು |
ರಾರಿ ಸಚರಾಚರಭರಿತ ದುರಿ |
ತಾರಿ ನಿತ್ಯಾನಂದ ನಿರ್ಜರನಿಕರದಾತಾರ ||
ವಾರಿಜಾಂಬಕ ವರಗುಣತ್ರಯ |
ಮಾರಪಿತ ವೇದಾಂತನುತ ವರ |
ಪೌರಚೆನ್ನಿಗರಾಯ ಪಾಲಿಸು ನಮಗೆ ಸತ್ಕೃಪೆಯ || ೧

ಶರಧಿಶಯನ ಮುಕುಂದ ಕಂಸಾ |
ಸುರಮಥನ ಸುರಮೌಳಿವಂದಿತ |
ಗಿರಿಧರಾಚ್ಯುತ ವೇಣುನಾದವಿನೋದ ಭವದೂರ ||
ಸರಸಿಜೋದ್ಭವನುತ ದಯಾಸಾ |
ಗರ ಮುರಾಂತಕ ದೇವ ವರಪುರ |
ದರಸ ಚೆನ್ನಿಗರಾಯ ಪಾಲಿಸು ಸಕಲಸಜ್ಜನರ || ೨

ಉರಗರಿಪುಕೇತನ ವಿಭೀಷಣ |
ವರದ ಹರಿ ಸದ್ಭಕ್ತಪೋಷಣ |
ದುರಿತಕುಲಗಿರಿವಜ್ರ ನರಕಾಂತಕ ಮಹಾಮಹಿಮ ||
ಪರಮಪುರುಷ ಯಶೋದೆಯಾತ್ಮಜ |
ದುರಿತದುಃಖವಿನಾಶ ವರಪುರ |
ದರಸ ಚೆನ್ನಿಗರಾಯ ರಕ್ಷಿಸು ನಮ್ಮನನವರತ || ೩

ಕರಿವದನ ಹೇರಂಬ ಲಂಬೋ |
ದರ ಚತುರ್ಭುಜ ಮೋದಕಪ್ರಿಯ |
ಪರಶುಪಾಶಾಂಕುಶಕರಾಂಕಿತದಿಂದ ರಂಜಿಸುವ ||
ಸುರನರೋರಗನಮಿತ ಗೌರೀ |
ವರಕುಮಾರಕ ವಿದ್ಯೈವಾರಿಧಿ |
ವರದಗಣಪತಿ ಪಾಲಿಸೆನ್ನಯ ಮತಿಗೆ ಮಂಗಳವ || ೪

ನಾರಿ ನಳಿನದಳಾಕ್ಷಿ ವರಜಾಂ |
ಭಾರಿನುತೆ ಚತುರಾನನಪ್ರಿಯೆ |
ಭೂರಿಶುಭಗುಣಭರಿತೆ ಭಕ್ತಾಶ್ರಿತಜನೋದ್ಧಾರೆ ||
ನೀರೆ ನಿಗಮವಿಚಾರೆ ಘನಸತ್ವಂ |
ಗಾರೆ ಭಜಕರಿಗೆ ವರವನೀವು |
ದಾರೆ ಶಾರದೆ ನಲಿದೊಲಿದು ನೆಲಸೆನ್ನ ಜಿಹ್ವೆಯಲಿ || ೫

ರಾಯರೊಳಗಗ್ಗಳೆಯನಪ ಕೌಂ |
ತೇಯನಿಗೆ ರೋಮಶಮಹಾಮುನಿ |
ರಾಯ ವಿಸ್ತರಿಸಿದನು ನಳಭೂವರನ ಚರಿತೆಯನು ||
ಪ್ರಿಯದಿಂದಾಲಿಪುದು ಸುಜನರು |
ಶ್ರೀಯರಸ ವರಪುರದ ಚೆನ್ನಿಗ |
ರಾಯನಂಕಿತವಾಗಿ ಪೇಳ್ವೆನೀಮಹಾಕಥೆಯ || ೬

ಪರಮಪುಣ್ಯಚರಿತ್ರಯಿದನಾ |
ದರಿಸಿ ಕೇಳುವ ನರರ ಜನ್ಮಾಂ |
ತರದ ಘನದುಷ್ಕರ್ಮದುಃಖವಿನಾಶ ದುರಿತಹರ ||
ಕರಿತುರಗರಥನಿಚಯರಾಜ್ಯದ |
ಸಿರಿಯ ಸಂಪದವಾಯುವನು ಮುರ |
ಹರನು ಮನ್ನಿಸಿ ಕುಡುವ ಸುಜನರಿಗಿಷ್ಟಸಂಪದವ || ೭

ಜನಪ ಕುರುಭೂಪಾಲನೊಳು ಜೂ |
ಜಿನಲಿ ರಾಜ್ಯವ ಸೋತು ಯಮನಂ |
ದನನು ತನ್ನನುಜಾತರೊಗ್ಗಿನಲಿ ಸತ್ಯವ ಬಿಡದೆ ||
ವನಿತೆ ಧೌಮ್ಯಮುನೀಂದ್ರ ಮಂತ್ರೀ |
ಜನಸಹಿತ ನಡೆತಂದು ಕಾಮ್ಯಕ |
ವನದೊಳಗೆ ಸಂಚರಿಸುತಿರ್ದನು ತೀರ್ಥಯಾತ್ರೆಯಲಿ || ೮

ಧರಣಿಪತಿ ಚಿಂತಿಸುತ ಹಲುಬಿದ |
ನರನ ಪದನೇನೆಂದು ತಪದಲಿ |
ಮಱೆದು ಕಳೆದನೊ ನಮ್ಮನಿನಿಬರನೆನುತಲಿರಲಂದು ||

ಸುರಪ ಕಳುಹಿದ ರೋಮಶನು ಮುನಿ |
ವರರ ಗಡಣದೊಳೆಯ್ದಿ ರವಿಭಾ |
ಸುರಸುತೇಜದೊಳಂದು ಕಾಮ್ಯಕವನಕೆ ನಡೆತಂದ || ೯
ಚ್ಯವನ ಗೌತಮ ಕಪಿಲ ಭೃಗು ಭಾ |
ರ್ಗವ ಭರದ್ವಾಜಾತ್ರಿ ಕೌಶಿಕ |
ಪವನಭಕ್ಷಣ ವಾಮದೇವ ಮರೀಚಿ ಮೈತ್ರೇಯ |
ಕ್ರತು ಕಣ್ವಾಂಗಿರಸ ಶುಕ ಗಾ |
ಲವ ಪರಾಶರ ದಾಲ್ಭ್ಯ ವರಮುನಿ |
ನಿವಹದೊಡನೈತಂದನಾರೋಮಶನು ಪಾಮುನಿಪ || ೧೦
ಅರಸನನುಜರುಸಹಿತ ಮುನಿಯ |
ಶ್ವರನು ಕಂಡಿದಿರೆದ್ದು ಕರಣದೊ |
ಳೊಲಗಿ ವಿನಯಂಗೆಯ್ದು ತಂದನು ತಳಿರ ಮಂಟಪಕೆ ||
ವರಮುನೀಂದ್ರರಿಗರ್ಘ್ಯಪಾದ್ಯೋ |
ತ್ಕರದೊಳುಪಚರಿಸುತ್ತ ಸಭಾ |
ಸ್ತರಣದಲಿ ಕುಳ್ಳಿರಿಸಿದನು ಭಯಭರಿತಭಕ್ತಿಯಲಿ || ೧೧
ನೀವಸೂತದ ದೇವರುಷಿಗಳು |
ಪಾವನರು ಮೂಲೋಕಕತಿಸಂ |
ಭಾವನೀಯರು ಸತ್ಯಸಂಧರು ನಿರ್ಮಲಾತ್ಮಕರು ||
ಆವನಾವನು ನಿಮ್ಮ ಮಹಿಮೆಯ |
ಭಾವಿಸುವಡೆನಗಳವೆ ನಿಮ್ಮ ಪ |
ದಾವಲಂಬನಸೇವೆ ದೊರಕಿತು ಧನ್ಯರಾವೆಂದ || ೧೨
ಧರಣಿಪತಿ ಸುಕ್ಷೇಮವೇ ನಿಜ |
ತರುಣಿ ನಿನ್ನನುಜಾತ ತನಯರು |
ವರಸಚಿವ ಸಾಮಂತ ಧೌಮ್ಯಮುನೀಂದ್ರ ಮಂತ್ರಿಗಳು ||
ಪರಿಣತರೆ ಕೇಳ್ವಡಲು ನಿಮ್ಮಯ |
ಪರಮಕರುಣಾಮೃತವೆ ನಮ್ಮನು |
ಪೊರೆವುತಿರೆ ಸುಕ್ಷೇಮ ಜೀಯಿಲ್ಲೆಂದನಾನೃಪತಿ || ೧೩

ಧಾರಿಣಿಯ ಸೋಲುತ್ತಲನುಜರು |
ವಾರಿಜಾಕ್ಷಿಯೆಸಹಿತ ಬಂದೀ |
ಘೋರಕಾನನದೊಳಗೆ ಗಿರಿಗಹ್ವರದ ಮಧ್ಯದಲಿ ||
ಸೇರಿ ತಟತಟರಾಗಿ ಬಳಲಿದ |
ರಾರು ಧರೆಯೊಳಗೆನ್ನವೊಲು ಭವ |
ದೂರ ಮುನಿಕುಲತಿಲಕ ಹೇಳೆಂದರಸ ಬಿಸುಸುಯ್ದ || ೧೪

ಎಲೆ ಮಹೀಪತಿ ನೀನಿನಿತುವು |
ಮ್ಮಳಿಸಲೇಕರಸುಗಳು ಪೂರ್ವದ |
ನಳಹರಿಶ್ಚಂದ್ರಾದಿರಾಘವನೃಪರು ಹಳುವದಲಿ ||
ಲಲನೆಯರು ತಾವಗಲಿ ಕಷ್ಟವ |
ಬಳಸಿ ಬಳಲಿದರಂತೆ ನಿನಗುಹ |
ಟಳಗಳುಂಟೇ ಬಿಡದೆ ಮನನೋಯದಿರು ನೀನೆಂದ || ೧೫

ಪರಮಋಷಿಗಳ ನೆರವಿಯೀ ಸಭೆ |
ಹರಿಯು ಕಾರುಣ್ಯಾಂಬುಧಿಯು ಸಿರಿ |
ನರವೃಕೋದರಮಾದ್ರಿತನಯರು ನಿನಗೆ ಬಾಹುಬಲ ||
ತರುಣಿಯೀ ಭೋಗೈಕಸಂಪ |
ತ್ತುರುತರದ ವನ ರಾಜ್ಯ ನಿನಗಿಂತಿ |
ರಲು ಸುಮಾರರಸ ಚಿಂತಿಸಲೇಕೆ ನೀನೆಂದ || ೧೬

ಆವಡೆಲೆ ಮುನಿನಾಥ ನಳನೃಪ |
ಮೇದಿನಿಯನುಳಿದವನು ತನ್ನ ತ |
ಳೋದರಿಯನೆಂತಗಲಿದನು ತಾನಾವ ದೆಸೆಯಿಂದ ||
ಸಾಧಿಸಿದನವನಿಯನು ಧರೆಯೊಂ |
ತಾಮದಾನಳನೃಪಗೆ ನೀನಿದ |
ನಾದರಿಸಿ ಪೇಳೆನಲು ನಗುತಿಂತೆಂದನಾಮುನಿಪ || ೧೭

ಭೂತಳೇಂದ್ರರೊಳಧಿಕಬಲವಿ |
ಖ್ಯಾತನಹ ನಳಚಕ್ರವರ್ತಿ ಧ |
ರಾತಳವ ಪಾಲಿಸಿದನಾತನ ವಿಮಲಚರಿತೆಯನು ||

ಸೂತಮುನಿ ಹೇಳಿದನು ಮೌನಿ |
ವ್ರಾತದಲ್ಲಿಯಗಸ್ತ್ಯಮುನಿ ಸಂ |
ಪ್ರೀತಿಯಿಂದಱುಹಿದನು ರಘುನಂದನನೊಳೀಕಥೆಯ || ೧೮

ವಸುಧೆಪತಿ ಕೇಳೀಚರಿತ್ರೆಯ |
ನಿಷಧವೆಂತೆಂಬಾಮಹಾಪುರ |
ವೆಸೆದುದಗಣಿತಗೋಪುರಪ್ರಾಕಾರಶಿಖರದಲಿ ||
ಮಿಸುನಿರತ್ನಪ್ರಭೆಗಳಲಿ ರಂ |
ಜಿಸುವ ದೇವಾಲಯಗಳಿದ್ದುವು |
ವಸುಧೆಗಚ್ಚರಿಯೆನಿಸಿತಾಪುರವರಸ ಕೇಳೆಂದ || ೧೯

ಮುರಿಮುರಿವ ಕೊತ್ತಳದ ಸಾಲಿನ |
ಪರುಠವದ ಹುಲಿಮುಖದ ಬಾಗಿಲ |
ಮಿಱುಪ ಮಣಿವಜ್ರದ ಕವಾಟದ ಗಂದವಟ್ಟಿಗೆಯ ||
ಉರುತರದ ವೇದಿಕೆಯ ಹೇಮದ |
ಮೆಱೆವ ಸೋಪಾನಗಳ ನೆಲೆಯ |
ಪ್ಪರಿಗೆಗಳ ಮೇಲೆಸೆವ ಕಲಶದ ಕಾಂತಿ ರಂಜಿಸಿತು || ೨೦

ಮುಗಿಲ ತುಡುಕುವ ತೆನೆಗಳಾಳ್ವೇ |
ರಿಗಳು ಪಾತಾಳಗಳ ಖಾತಗ |
ಳಗಳ ಬಳಸಿದ ಕೋಟೆ ಸುತ್ತಾವರಿಸಿದುನ್ನತದ ||
ಗಗನವೀಥಿಯ ತಾರಕೆಯವೋಲ್ |
ಸೊಗಯಿಸುವ ಕನ್ನಡಿಯ ಸಾಲ್ಗೊಂ |
ಬೆಗಳ ರತ್ನಪ್ರಭೆಗಳಲಿ ರಂಜಿಸಿದುದಾನಗರ || ೨೧

ರವಿಶಶಿಯ ವೀಧಿಗಳ ಹೇಮದ |
ವಿವಿಧಮಣಿಭಿತ್ತಿಗಳ ಕಾಂತಿಯ |
ದಿವವನಣೆದುದು ರತ್ನಸಿಂಹಯುದ ಭದ್ರಭವನಿಕೆಯ ||
ಯುವತಿಯರ ಸಂಗೀತವೀಣಾ |
ರವದ ರಹಿಯಲಿ ಮನಕೆ ಸವಿದೋ |
ಱುವ ಮಹಾರಚನೆಯಲಿ ಮೆಱೆದುದು ನಿಷಧವರನಗರ || ೨೨

ವಸುಧೆಯಮರರು ಕ್ಷತ್ರಿಯರು ರಂ |
ಜಿಸುವ ವೈಶ್ಯಚತುರ್ಥರುನ್ನತ |
ಕುಶಲವಿದ್ಯಾಧಿಕರು ಕವಿಗಳು ಮಲ್ಲಗಾಯಕರು ||
ಅಸಮರಥಿಕರು ಸಮರದಲಿ ಸಾ |
ಹಸರು ಕರಿರಥತುರಗಪಾಯ್ದಳ |
ವೆಸೆವುದಗಣಿತಚಾತುರಂಗದಿ ನಿಷಧನರನಗರ || ೨೨

ಸಾಲಬಿಲ್ವಕಪಿತ್ಥಜಂಬೂ |
ಮಾಲದಾಡಿಮವಕುಳವಟಚಂ |
ತಾಲಕ್ರಮುಕಕದಂಬಕುರುವಕಕದಳಿಖರ್ಜೂರ ||
ತಾಲಚಂದನಚರಸೀರತ |
ಕ್ಕೋಲಕೇತಕಿಕುಟಜಸರ್ಜರ |
ಸಾಲತರುಗಳ ಸಿರಿಯಿಂದುದ್ಯಾನ ರಂಜಿಸಿತು || ೨೩

ಭೂರಿಸುಖ ಕೈಲಾಸಪುರಾಧಿಪ |
ವೀರಸೇನನೃಪಾಲ ರಿಪುಸಂ |
ಹಾರನಾತನ ತನಯ ನಳನೃಪನೆಂಬುದಭಿಧಾನ ||
ಭೂರಿವಿಕ್ರಮಪರಮಧರ್ಮವಿ |
ಚಾರ ಶಶಿಕುಲಮೌಳಿ ಘನಗಂ |
ಭೀರ ಪಾಲಿಸುತಿರ್ದ ಸಪ್ತದ್ವೀಪದವನಿಪರ || ೨೪

ಶರಧಿಮೇರೆ ದಿಗಂತದವನೀ |
ಶ್ವರರು ಕಪ್ಪವ ತೆರುವರಗಣಿತ |
ಧುರವಿಜಯದೋರ್ಬಲರು ಮಣಿಮಯಮುಕುಟವರ್ಧನರು ||
ಚರಣಕಾನತರಾಗಿ ನಳಭೂ |
ವರನ ಭಜಿಸುತಲಿರ್ದರಮರೇ |
ಶ್ವರನವೋಲಗದಂತೆ ಮೆರೆದುದು ನೃಪತಿಯಾಸ್ಥಾನ || ೨೫

ಭೂಮಿಪತಿ ಕೇಳುತ್ತಲುತ್ತರ |
ಭೂಮಿಯಲಿ ಪ್ರಜ್ವಲಿಸುತಿಹ ಸು |
ತ್ರಾಮಪುರದಂತೆಸೆವುದಲ್ಲಿ ವಿದರ್ಭನಗರವದು |

ರಾಮಣೀಯಕರಚನೆಯಲಿ ಸವ |
ಹೇಮರಜತಸುರತ್ನಸೌಧ |
ಸ್ತೋಮಗಳ ಸಾಲಿನಲಿ ರಂಜಿಸುತಿರ್ದುದಾನಗರ || ೧೭

ಅಲ್ಲಿಗಧಿಪತಿ ಭೀಮನೃಪ ಗುಣ |
ದಲ್ಲಿ ನಯದಲಿ ವೀರ್ಯದಲಿ ವಿತರಣ |
ದಲ್ಲಿ ಚಾತುರ್ಯದಲಿ ಸೌಭಾಗ್ಯದಲಿ ಧೈರ್ಯದಲಿ ||
ಬಲ್ಲಿದನು ತನಗಿನ್ನು ನಿಜಸುತ |
ರಿಲ್ಲವೆಂದುಮ್ಮಳಿಸುತಿರೆ ದಮ |
ನಲ್ಲಿಗಾಕ್ಷಣ ಬಂದನಾದಮನಾಖ್ಯ ಮುನಿವರನು || ೧೮

ಬಂದ ಮುನಿಗವನೀಶ ವಂದಿಸಿ |
ನಿಂದು ಕರಗಳ ಮುಗಿದು ವಿನಯದೊ |
ಳೆಂದು ಸುತಸಂತಾನವಿಲ್ಲದ ಸಿರಿಯದೇಕೆಂದು ||
ನೊಂದು ನುಡಿಯಲು ಸುತರ ಪಡೆಯುವ |
ತಂದೆಗಿದು ಸಂತಾನವಲ್ಲದೆ |
ಯೆಂದು ಮುನಿ ಕರುಣದಲಿ ಸಂತೈಸಿದನು ಭೂಪತಿಯ || ೧೯

ಯೋಗದೃಷ್ಟಿಯೊಳರಿದು ಮುನಿವರ |
ನಾಗ ನೃಪನೊಡನೆಂದ ಚಿತ್ರದ |
ಯಾಗವನು ಮಾಡರಸ ತಪ್ಪದು ಪುತ್ರಲಾಭವೆನೆ ||
ಆ ಗರುವ ಮುನಿಮಂತ್ರದಿಂದ ಸ |
ರಾಗದಲಿ ಶುಭದಿವಸ ವರಸುತ |
ಯಾಗವನು ಪೂರೈಸಿದನು ಸುರನರರು ದಣಿವಂತೆ || ೨೦

ಅರಸ ಕೇಳಾಯಾಗಸಮನಂ |
ತರದೊಳಾಮುನಿಮುಖ್ಯರನು ಸ |
ತ್ಕರಿಸಿ ಕಳುಹಿದನವರವರನುಚಿತೋಪಚಾರದಲಿ ||
ತರುಣಿಗಾದುದು ಗರ್ಭ ಮಂಗಳ |
ಕರಸುಲಗ್ನಸುತಾರೆಯಲಿ ನೃಪ |
ನರಸಿ ಪಡೆದಳು ತನುಜೆಯೊರ್ಬ್ಬಳ ಲೋಕಸುಂದರಿಯ || ೨೧

ಅನುರದುಂದುಭಿ ಮೊಳಗಲಿಳೆ ಸಂ |
ಭ್ರಮಿಸೆ ಪುರಜನ ನಲಿಯೆ ನೃಪನಾ |
ಸಮಯದಲಿ ದಮನಾಖ್ಯಮುನಿಗಭಿನಮಿಸಿ ನಿಜಸುತೆಗೆ ||
ವಿಮಲನಾಮವ ಪಾಲಿಸೆನೆ ಮುನಿ |
ಕಮಲಮುಖಿ ದಮಯಂತಿಯೆಂದು |
ತ್ತಮದ ಪೆಸರೆಂದೊಱೆದು ತಾಪ್ರೋಜ್ಝಮಟ್ಟನಾಶ್ರಮಕೆ || ೨೦

ನಿಱಿಗುರುಳ ಸಿರಿಮುಡಿಯ ವಿಮಲಾ |
ಧರದ ತೋಳ್ಗಳ ಕಂಬುಕಂಠದ |
ತರಳನಯನದ ಸಂಪಗೆಯ ನಾಸಿಕದ ಪೆಱೆನೊಸಲ ||
ಹರಿಯಮಧ್ಯದ ಹಂಸಗಮನದ |
ಗುರುಕುಚದ ಕರಪಲ್ಲವದ ಸರ |
ಸಿರುಹಮುಖಿ ನಲಿದಾಡುತಿರ್ದಳು ರಾಜಭವನದಲಿ || ೨೧

ಗುಣದೊಳಗೆ ಶೀಲದಲಿ ಮಾತಿನ |
ಬಣಿತೆಯಲಿ ಗಾಂಭೀರ್ಯದಲಿ ವಿತ |
ರಣದಿ ವೀಣಾರಚನೆಯಲಿ ಗುರುದೇವಭಕ್ತಿಯಲಿ ||
ಪ್ರಣುತಿಸಲು ಶರ್ವಾಣಿರತಿಯರಿ |
ಗೆಣೆಯೆನಿಪ ಚೆಲುವಿಕೆಯ ಮಿಕ್ಕಿನ |
ಬಣಗುಸತಿಯರು ಸರಿಯೆ ಲೋಕದೊಳೆಂದನಾಮುನಿಪ || ೨೨

ಕೇಳು ಪಾಂಡವತನಯ ಭೀಮನೃ |
ಪಾಲನೋಲಗದಲ್ಲಿ ಧರಣೀ |
ಪಾಲಕರ ಚರಿತಪ್ರಸಂಗದೊಳಿರಲು ನಳನೃಪನ ||
ಶೀಲವನು ಸೌಂದರ್ಯವಿಭವವಿ |
ಶಾಲವನು ಲಾವಣ್ಯನಿಪುಣಗು |
ಣಾಳಿಗಳ ವಿಸ್ತರಿಸಿ ಕೊಂಡಾಡಿದರು ಕವಿಜನರು || ೨೩

ವನಜಮುಖಿಯಾವಾರ್ತೆಯೆಲ್ಲವ |
ಮನವೊಲಿದು ಕೇಳಿದಳು ಬಗ್ಗುತ |
ನನೆದುದಂತಃಕರಣ ಹೆಚ್ಚಿದ ಚಿತ್ತವೃತ್ತಿಯಲಿ ||

ನೆನೆದು ಬರೆವಳು ನಳನ ರೂಪವ |
ನನುನಯದಿ ಚಿತ್ರವನು ಮಿಗೆ ಸಂ |
ಜನಿಸಿತವನಲಿ ಮೋಹವೆಲೆ ಧರಣೀಶ ಕೇಳೆಂದ || ೩೬

ಆಗ ಮದನನು ತನ್ನ ಬಲವನು |
ಬೇಗದಲಿ ಜೋಡಿಸಲು ಭೋಯೆಂ |
ದಾಗಲರಸಂಚೆಗಳುವಳಿಮಿಂಡುಗಳು ನಲಿದಾಡೆ ||
ಕೋಗಿಲೆಗಳಾರ್ಭಟಿಸೆ ಗಿಳಿಗಳು |
ಕೂಗೆ ನವಿಲುಗಳಾಡೆ ಮನ್ಮಥ |
ನಾಗ ಪೂಗಣೆಗಳನು ಸಂಧಿಸುತೆಚ್ಚನಂಗನೆಯ || ೩೭

ಉಣ್ಣಳನ್ನವನಖಿಳವಸ್ತುವ |
ಕಣ್ಣಿನಿಂದೀಕ್ಷಿಸಳು ಸತಿಯರ |
ಮನ್ನಣೆಗೆ ಮೈಗೊಡಳು ಬಲುಬೇಸಱದಿ ಬಳಲುವಳು ||
ಬಣ್ಣಿಸಳು ಮಾತಾಡಲೊಲ್ಲಳು |
ಬಣ್ಣಗುಂದಿದ ದೇಹದೊಳಗೇಳ |
ವೆಣ್ಣುಗಳ ಸೌಖ್ಯವನು ಮಱೆವಳು ಮದನನಿಸುಗೆಯಲಿ || ೩೮

ಕೆಳದಿಯರು ಕಂಡಂತರಂಗದಿ |
ಬಲಿದ ವಿರಹವ ರಾಜವದನೆಯ |
ಹೊಳಲೊಳುದ್ಯಾನವನಸುರಚಿರಪುಷ್ಪತರುಗಳಲಿ ||
ಎಳದಳಿರ ನೆಳಲಿನಲಿ ಪರಿಮಳ |
ದಲರ ಪನ್ನೀರಿನಲಿ ಸಖಿಯರು |
ನಲವು ಹಿಂಗಿದ ಸತಿಯನುಪಚರಿಸಿದರು ಬನದೊಳಗೆ || ೩೯

ಕೆಲರು ಹದನೇನೆಂದು ಚಿಂತಿಸೆ |
ಕೆಲರು ಪನ್ನೀರುಗಳ ತಳಿವರು |
ಕೆಲರು ಕಪ್ಪುರಗಂಧವನು ಲೇಪಿಸಿದರಂಗದಲಿ ||
ಕೆಲರು ಬೀಸಿದರಾಲವಟ್ಟದಿ |
ಕೆಲರು ಹೂವಿನ ಹಾಸಿಗೆಯ ಕೋ |
ಮಲೆಗೆ ನಾನಾವಿಧದ ಶೈತ್ಯೋಪಚಾರವ ರಚಿಸಿ || ೪೦

ಈಪರಿಯೊಳಾಕಾಮಿನಿಗೆ ಶೈ |
ತ್ಯೋಪಚಾರವ ಮಾಡಿದರು ಪರಿ |
ತಾಪ ವೆಗ್ಗಳಿಸುತ್ತಲಿರಲಿನ್ನೇನು ಹದನೆನುತ ||
ಚಾಪಳೆಯರಾಲೋಚಿಸುತ ಕಡು |
ಪಾಪಿಯಂಗಜನೆಂದು ಬೈಯುತ |
ತೋಪಿನೆಡೆಗಿರದೈದಿ ತಂದರು ಸತಿಯ ಸಂತೈಸಿ || ೩

ಬಕುಳ ಬದರಿಯು ನಿಂಬ ವಟ ಕೇ |
ತಕಿ ಸರಳ ಪಾದರಿ ಕುಟಜ ಚಂ |
ಪಕ ಲವಂಗ ಕಪಿತ್ಥ ದಾಡಿಮ ಕ್ರಮುಕತರುಗಳಲಿ ||
ಶುಕ ನವಿಲು ಜಿಲಿಬಿಲಿಗ ಗೀಜುಗ |
ಬಕ ಹಸುಬ ಗೊರವಂಕ ಟಿಟ್ಟಿಭ |
ಪಿಕ ಚಕೋರಕ ವಿಹಾನುಬ್ಲಿಗ ಪಕ್ಕಿಗಳು ರಂಜಿಸಿತು || ೪

ಬಿಗಿದ ರತ್ನದ ಸಾಲ ಸೋಪಾ |
ನಗಳ ಕೆಂದಾವರೆಯ ಮೊಗ್ಗೆಯ |
ಮುಗುಳ ತುಂಬಿಯ ಹಂಸಗಳ ಬಕಚಕ್ರವಾಕಗಳ ||
ಸೊಗಸುದೋರುವ ಸರಸಿಯಲಿ ವರ |
ಸುಗುಣೆಯರು ದಮಯಂತಿಯೊಳು ಮನ |
ಸೊಗಸಿನಿಂದ ವಸಂತವಾಡಿದರಾವಿದಗ್ಧೆಯರು ||

ಬಂದು ಸತಿಯರು ಕೊಳನ ತೀರದಿ |
ನಿಂದು ವಸ್ತ್ರಾಭರಣಭೂಷಣ |
ದಿಂದ ಶಶಿಕಾಂತೋಪಲದಿ ಕುಳ್ಳಿರಿಸಿ ಶಶಿಮುಖಿಯ ||
ಅಂದು ವಿರಹದ ವೆಥೆಯ ನಾನಾ |
ಛಂದದಲಿ ಶೈತ್ಯೋಪಚಾರಗ |
ಳಿಂದ ಸಂತೈಸಿದರು ವರಪುರವರಸನಾಜ್ಞೆಯಲಿ ||

ಇಂತು ಸಂಧಿ ಎರಡು.

## ॥ ಎರಡನೆಯ ಸಂಧಿ ॥

ಸೂಚನೆ ॥ ಫಲವು ಸಮನಿಸೀತಿಯಲಿ ಹಂಸೆಯ ।
ಕಳುಹಲಂದಾರಾಯಭಾರವ ।
ನಳನೃಪತಿಗೆ ಸತಿಯಹಾವಳಾದಮಯಂತಿ ಮನವೊಲಿದು ॥

ಕೇಳು ಕುಂತೀತನಯ ಭೀಮನೃ ।
ಪಾಲತನುಜೆಗೆ ವಿರಹ ಬಲಿದು ವಿ ।
ಶಾಲವಾಗಿರಲತ್ತ ಕೇಳ್ ನಿಷಧನಗರಿಯನು ।
ಪಾಲಿಸುವ ನಳಚಕ್ರವರ್ತಿಯು ।
ಪ್ರೋಲಗದ ರಚನೆಯಲಿ ರತ್ನದ ।
ಸಾಲುಹೊಳಹಿನ ಸಿಂಹಪೀಠದೊಳೆಸೆದು ಕುಳ್ಳಿರ್ದ ॥ ೧

ಗೌಳ ವಂಗ ಕಳಿಂಗ ಕುಂತಳ ।
ಚೋಳ ಬರ್ಬರ ಸಿಂಧು ಕೇರಳ ।
ಲಾಳ ಮಾಗಧ ಮರಾಳ ಸೌರಾಷ್ಟ್ರಾದಿ ಭೂಮಿಪರು ।
ಬಾಳೆಯರು ಮಂತ್ರಿಗಳು ವೀರಭ ।
ಟಾಳಿ ನಟಗಾಯಕರು ಕವಿತಾ ।
ಜಾಲಸಂದೋಹದಲಿ ಶೋಭಿಸುವ ನೃಪತಿಯಾಸ್ಥಾನ ॥ ೨

ಆಸಮಯದಲಿ ಬಳಿಗೆ ಬಂದಾ ।
ದೇಶಯಾತ್ರಿಕಭೂಸುರರೊಳವ ।
ನೀಶ ಕೇಳಿದನಿಳೆಯೊಳೇನುಂಟತಿವಿಚಿತ್ರವೆನೆ ॥
ಭೂಸುರೋತ್ತಮರೆಂದರೆಲೆ ಧರ ।
ಣೀಶ ಕೇಳು ವಿದರ್ಭನಗರದೊ ।
ಳೀಸು ಪುಣ್ಯೋದಯದಿ ಪಡೆದನೊ ಭೀಮನೃಪ ಸುತೆಯ ॥ ೩

ಅವಳ ರೂಪಗುಣಾತಿಶಯಗಳ |
ನಮಗೆ ಬಣ್ಣಿಸಲಳವೆ ಕೇಳಾ |
ಯುವತಿ ಲೋಕದ ಸತಿಯ ಬಗೆಯಂತಲ್ಲ ಭಾವಿಸಲು ||
ಪ್ರವಿಮಲಾಕಾರದಲಿ ನೋಡಲು |
ಸವಿನುಡಿಯ ಸಂಭಾಷಣೆಗಳಲಿ |
ಭುವನದಲಿ ಕಂಡಿಲ್ಲ ವಮಯಂತಿಯ ಸಮಾನರನು ||
ಮುರಹರನ ಸಿಜಸೊಸೆಯ ರೂಪಂ |
ತಿರಲಿ ಚಂದ್ರನ ಮಗಳ ಚೆಲುವಂ |
ತಿರಲಿ ಮೈನಾಕನ ಸಹೋದರಿಯಂದವಂತಿರಲಿ ||
ಶರಧಿತನುಜೆಯ ಸೌಂದರಿಯವನು |
ಮುಸಿತೆಂಬುದು ಲೋಕದೊಳಗಾ |
ಸರಸಿಜಾಕ್ಷಿಯ ಬಗೆಗೆ ಸರಿದೊರೆಯಿಲ್ಲ ಕೇಳೆಂದ ||
ಮಿಸುನಿಯೋಲೆಯ ಡಾಳ ಕದಪಿನೊ |
ಳೆಸೆಯೆ ಮೋಲುದು ಜಾಱಿ ಕುಚಭರ |
ದೆಸೆಯೆ ನಡುವಲ್ಲಾಡೆ ಮಸಗಿದ ಮಂದಹಾಸದಲಿ ||
ಎಸೆವ ನೋರ್ಮುಡಿಬಾರದಲಿ ಬಾ |
ಗಿಸಿದ ಕೊರಳಿನ ಕೈಯ ವೀಣೆಯ |
ಬಿಸರುಹಾಕ್ಷಿಯ ಸೊಬಗ ಬಣ್ಣಿಸಲಳವೆ ತನಗೆಂದ ||
ಹೇಳುತಿರೆ ನುಡಿನುಡಿಗೆ ಮೆಚ್ಚುತ |
ಕೇಳಿ ತಲೆದೂಗಿದನು ನಿಷಧ ವಿ |
ಶಾಲನಯನಕೆ ಕಮಲಮುಖಿ ಗೋಚರಿಸಿದಂತಾಗೆ ||
ಬಾಲಕಿಗೆ ಮೋಹಿಸುತ ಪುಷ್ಪಶ |
ರಾಳಿಯಲಿ ಮನನೊಂದು ಶಿವಶಿವ |
ಲೋಲಲೋಚನೆಯೆಂತು ತನಗಹಳೆನುತ ಚಿಂತಿಸಿದ ||
ವಸಿತೆಗುಣಗಳನೊಂದನೊಂದನು |
ಮನದೊಳಗೆ ಸವಿಮಾಡಿ ತರುಣಿಯ |
ನೆನೆದು ಪೊಂಪುಳಿಯಾಗಿ ವಿರಹದಿ ಮನನಕೇಡಾಗಿ ||

ಘನವೆಸನದಲಿ ಕಾಯ ಕುಂದಿದ |
ಜನಪ ನಳನಿರೆ ಬೇಂಟೆಕಾಱರ |
ಜನನಿವಹದಿಂ ಬಂದರಾಸಮಯದಲಿ ವನಚರರು || ೮
ತಂದು ಫಲವಸ್ತುಗಳ ಕಾಣಿಕೆ |
ಯಿಂದ ಕೈಮುಗಿದರಸ ಮೃಗ ಘನ |
ವಿಂದು ಬೇಂಟೆಗೆ ಗಮಿಸಬೇಕೆನೆ ನೃಪತಿ ನಸುನಗುತ ||
ಇಂದು ವಿರಹದ ಕಳೆವ ಪರಿ ಲೇ |
ಸೆಂದು ಶಬರರ ಕಳುಹಿಯೋಲಗ |
ದಿಂದಲರಮನೆಗೆಯ್ದಲಸ್ತಾಂಬುಧಿಯೊಳಿನನಿಳಿದ || ೯
ನಳಿನಮುಖನುದಯದಲಿ ನಳನೃಪ |
ತಿಲಕ ಕರಸಿದ ಸಕಲದಳವನು |
ಹೊಳೆವ ಖಡ್ಗ ಕಠಾರಿ ಮೊದಲಾದಖಿಳಕೈದುಗಳ ||
ಬಲುಭಟರು ಬೇಂಟೆಯಲಿ ನಾನಾ |
ಬಲೆಗಳಂಬಿನ ಕೋಲುಕಣ್ಣಿಯ |
ಬಲುಭುಜರು ಸಡಗರಿಸಿ ಮೊಱೆದುದು ಪುರದ ಬಾಹ್ಯದಲಿ || ೧೦
ಅರಸ ಕೇಳ್ ಶಶಿಕುಲಶಿರೋಮಣಿ |
ಧರಿಸಿದನು ನವರತ್ನಮಯದಾ |
ಭರಣಗಳ ದಿವ್ಯಾಂಬರಾದಿಸುಗಂಧಲೇಪದಲಿ ||
ತರಿಸುತೇಱಿದ ವಾಯುವೇಗದ |
ತುರಗವನು ಸಂದಣಿಸಿ ಮೋಹರ |
ತೆರಳತಗಣಿತವಾದ್ಯದಲಿ ನೆಲ ಬಿರಿಯಲೈತಂದ || ೧೧
ಏನ ಹೇಳುವೆನರಸ ಹೊಕ್ಕರು |
ಕಾನನವ ಬಳಸಿದರು ಮೃಗತತಿ |
ಯೂನಲಾಪುದೆ ತೆಗೆದು ಹಾಯ್ದುದು ಭಟರ ಘಲ್ಲಣೆಗೆ ||
ಆನೆಗಳ ಕೆಡಹಿದರು ಬಲುಸಂ |
ಧಾನದಲಿ ಹುಲಿ ಕರಡಿ ಮುಸು ಮೊಲ |
ವಾನರಾದಿ ಸಮಸ್ತಮೃಗಗಳ ತಱುಬಿ ಕೆಡಹಿದರು || ೧೨

ಹತ್ತಿ ತದ್ಗಿರಿಶಿಖರವನು ಪುರ |
ವೊತ್ತನಲಿ ಬಲಿಗಳನು ಹಾಯ್ಕುದ |
ರೊತ್ತಿ ಸೂಸಿದರೊಂದು ಘನತರಸಿಂಹವಬ್ಬರಿಸಿ ||
ಹೊತ್ತ ಕೋಪದಿ ಸೈನ್ಯವನು ಮುಱಿ |
ದೊತ್ತಿ ಬರುತಿರೆ ಕಂಡು ನೃಪ ಜಿಂ |
ಬತ್ತಿ ಕಡಿದನು ಮೃಗಪತಿಯು ಬಸವೆಲ್ಲ ಸುಗ್ಗಗೆ || ೧೨

ಸಿಲಿಸಿ ಜೋಂಟೆಯನಲ್ಲಿ ಬಹಲಿದ |
ಬಲಸಮೇತದಿ ಬಂದು ತತ್ಪುರ |
ವಳಯದುದ್ಯಾನವನಹೊಕ್ಕನು ಬಲಿದ ವಿಟಪದಲಿ ||
ಸಲವು ಹಿಂಗದ ಮನದ ದುಗುಡದೊ |
ಳಿಳಿದು ಕೊಳದಲಿ ಜಾನುಜಂಘೆಯ |
ತೊಳೆದು ಹರಿಸ್ರ ತನಗಿ ತಿರುಗಿದನಂದು ವನದೊಳಗೆ || ೧೩

ಚಕೋಳನ ತಿಂತಪವಿ ತರುಗನ |
ನೇಕವನಜಕೊಳಗೊಂದು ತಾವಿನೊ |
ಳೇಕವೃಕ್ಷದ ನೆರಳಿನಲಿ ನವಕುಸುಮದಿಕ್ಕೆಯಲಿ ||
ಚಕಮಲಜನ ತುರಗ ಸಿದ್ರಾ |
ವ್ಯಾಕುಲದಿ ಮಲಗಿರಲು, ಕಂಡ ದಿ
ವಾಕರೋನ್ನತಕುಘ್ರತೇಜದ ರಾಜಹಂಸನನು || ೧೪

ಅರುಣಮಯದಃವನದ ಪದಯುಗ |
ಗಱಿಗಳುನ್ನತಧವಳದೇಹದ |
ಪರಮತೇಜಸ್ಸೊಳಸೆವ ಪಕ್ಷಿಯು ಕಂಡು ಜಿಂಗಾಗಿ ||
ಪರಪರಾ ! ಇದಱಾಯುತನ ಪುರ |
ಪರನು ತಾನೆ ಬಲ್ಲನನುತ
ಕ್ಕಱದಿ ಮೆಲ್ಲನೆ ಕರನಸಿಂತುತ ಪಿಡಿದ ಹಂಸವನು || ೧೫

ಬದಱಿ ಕೂಣಿಯಲು ಹಸ್ತದೊಳಗದ |
ಕವಲದಂವದಿ ಪಿಡಿಯಲರಸನ |
ವದನಕಮಲವ ನೋಡಿ ಹೆದಱಿತು ಬಹಳಭೀತಿಯಲಿ ||

ಹೃದಯ ಕರಗುವ ಮಾತನೆಂನುದು |
ಮದಕರಿಗೆ ನೊರಜಂ ತರವೆ ಕೈ |
ಸವರ ವೀರನು ಕೊಲುವುದನುಚಿತವೆಯೆಂದುದಾಪಕ್ಷಿ || ೧೭

ಕರಿಗಳನು ಮುರಿದಿಡುವ ಸಿಂಹಕೆ |
ನರಿಗಳಿದಿರೇ ತಾನು ನಿಮಗಂ |
ತರವೆ ಸಾಕದಂತಿರಲಿ ಕಂಡವರೆಲ್ಲ ನಗದಿಹರೆ ||
ಅರಿಭಯಂಕರ ಶತ್ರುಗಳ ಸಂ |
ಹರಿಸುವುದು ನೃಪನೀತಿ ನಿನ್ನಗಿದು |
ತರವೆ ಬಿಡು ಪರಹಿಂಸೆ ದೋಷವಿದೆಂದುದಾಪಕ್ಷಿ || ೧೮

ಬಡಬಗೌತಣವಿಕ್ಕುವಡೆಯೊ |
ಕ್ಕುಡಿಕೆಹಾಲೇ ಮುಂಜು ಸುರಿಯಲಿ |
ಕೊಡನೆ ಕೆರೆ ತುಂಬುವುದೆ ನೃಪ ನಿನ್ನ ಭುಂಜಿಸಲು ||
ಒಡಲಿಗಾಪ್ಯಾಯನವೆ ಕೇಳರೆ |
ಪೊಡವಿಪತಿ ಬಿಡು ನನ್ನ ಮನೆಯಲಿ |
ಮಡದಿಮಕ್ಕಳ ಗೋಳ ನೋಡೆಂದೊಱಲಿತಾಪಕ್ಷಿ || ೧೯

ಮರನ ಹುತ್ತವನೇಱುವರ ಸಂ |
ಗರದಿ ದೈನ್ಯಂಬಡುವರಾಯುಧ |
ಮುರಿದ ಬಱಗೆಯ್ಯವರ ನೀರೊಳು ಪೊಕ್ಕು ನಿಂದವರ ||
ತರುಣಿಯರ ಮಱಗೊಂಡವರ ನಿ |
ಬ್ಬರದಿ ಮುರಿದೋಡುವರ ನಿದ್ರಾ |
ಭರದೊಳಿರ್ದರ ಕೊಲುವುದನುಚಿತವೆಯೆಂದುದಾಹಂಸ || ೨೦

ನುಡಿಗೆ ನಾಚಿದನರಸ ಹಂಸನ |
ನಡೆವಳಿಗೆ ಮೆಚ್ಚಿದನು ನಿನ್ನನು |
ಬಡಿದು ಕೊಲುವವನಲ್ಲ ನಿನ್ನಾಲಯಕೆ ಪೋಗೆನುತ ||
ಬಿಡಲು ಱಕ್ಕೆಯ ಕೊಡಹಿ ಹಾಱಿತು |
ಪೊಡನೆ ಮರಳಿತು ಧರೆಗೆ ರಾಯನ |
ಕಡೆಗೆ ವಂದಿಸಿ ಮುದದಿ ನುಡಿದುದು ನೃಪಗೆ ವಿನಯದಲಿ || ೨೧

ಭೂರಮಣ ಕೇಳಸುವ ಕಾಯ್ದುಪ |
ಕಾರವಮಾಡಿದೆ ನೀನು ನಿನಗುಪ |
ಕಾರವಮಾಡುವೆನೆನಲದೇನೆಂದರಸ ಬೆಸಗೊಂಡ ||
ಸಾರಹೃದಯನೆ ಚಿತ್ತವಿಸು ವಿ |
ಸ್ತಾರದಿಂದಱುಹುವೆನು ಭುವನದೊ |
ಳಾರಿಗುಂಟೀಪರಮಸುಕೃತಗಳೆಂದುದಾಪಕ್ಷಿ || ೧

ಅರಸ ಕೇಳತಿದೂರದಲಿ ಸುರ |
ಪುರವ ಪೋಲ್ವ ವಿದರ್ಭಪಟ್ಟಣ |
ದರಸು ಭೀಮನೃಪಾಲನಾತನ ತನುಜೆ ದಮಯಂತಿ ||
ಪರಮಪುಣ್ಯಾಂಗನೆ ಮಹಾಸೌಂ |
ದರಿ ನಿಪುಣೆ ಗಜಗಮನೆ ನಯಗುಣ |
ಭರಿತೆ ಸೊಬಗಿನ ಸೋನೆ ತಾನಿಹಳಲ್ಲಿ ವನಜಾಕ್ಷಿ || ೧

ಪೊಗಳಲಳವೇ ಸತಿಯ ಚೆಲುವಿನ |
ಬಗೆಯ ಭಾವಿಸಿ ನೋಡಲತಿಸೋ |
ಜಿಗವಲೇ ದಮಯಂತಿ ಯೌವನರೂಪರೇಖೆಯಲಿ ||
ನಗೆಮೊಗದ ಪೊಂಬೊಗರ ಮಿಂಚಿನ |
ಬುಗುರಿಮೊಲೆಗಳ ಸೆಳೆನಡುವ ಸೆ |
ಳ್ಳುಗುರ ಬೆಡಗಿನ ಕಾಂತೆ ರಂಜಿಸುತಿರ್ಪಳಾಪುರದಿ || ೧

ಕ್ಷಿತಿಯೊಳಿಹ ಸತಿಯರೊಳಗಮರಾ |
ವತಿಯೊಳಿಹ ಸ್ತ್ರೀಯರಲಿ ಮೇಣಾ |
ವಿತಳದೊಳಗಿಹ ನಾರಿಯರಲೀಕ್ಷಿಸಿದೆನವಳಿಂಗೆ ||
ಪ್ರತಿಯ ಕಾಣೆನು ರೂಪಿನಲಿ ನೀ |
ನತಿಚೆಲುವ ನಿನಗವಳು ಹಾಸಟ |
ಸತಿಗೆ ನೀನೇ ರಮಣನಲ್ಲದೆಯಿತರರನು ಕಾಣೆ || ೧

ಅವಳು ನಿನಗೊಲಿವಂತೆ ಮಾಡುವೆ |
ಶಿವನ ಕೃಪೆ ನಿನಗುಂಟು ನಮ್ಮಲಿ |
ನವಡಿನುಡಿಯಿಲ್ಲರಸ ನಂಬುವುದೆನ್ನ ನೀನೆನಲು ||

ಅವನಿಪತಿ ನಸುನಗುತ ಹಂಸವ |
ಸವಿನುಡಿಗೆ ಮನಸೋತು ವಿರಹದ |
ತವಕದಲಿ ಬೋಳೈಸಿ ನುಡಿದನು ನೃಪತಿ ಖಗಪತಿಗೆ || ೧೬
ಮನಸಿಜನ ಶರಹತಿಗೆ ನೊಂದೆನು |
ತನುವ ಸೈರಿಸಲಾರೆ ನಿನಗಾ |
ವನಿತೆಯನು ಪ್ರೀತಿಸುತ್ತ ಸಲಹೆನ್ನನುವ ಕರುಣದಲಿ ||
ಎನಗೆ ನೀನೇ ಪರಮಬಾಂಧವ |
ಮನಕೆ ಹರುಷವ ಮಾಡು ನೀನೀ |
ಬನಕೆ ಬಹ ಪರಿಯಂತ ತಾನಿಲ್ಲಿಹೆನು ಹೋಗೆಂದ || ೧೭
ಕೇಳು ಧರ್ಮಜ ನಳನೃಪಾಲನ |
ಬೀಳುಕೊಂಡು ಸರಾಗದಿಂದ ವ |
ನಾಲಯವ ಪೊಱಮಟ್ಟು ತೆರಳಿತು ವಾಯುವೇಗದಲಿ ||
ಆಲತಾಂಗಿಯ ಪತಿಯ ಕೀರ್ತಿ ವಿ |
ಶಾಲವಾದಂದದಲಿ ರಾಜಿಸು |
ರಾಳ ಗಗನಕೆ ಹಾಯ್ದು ಕಂಡಿಳಿತಂದುದಾಪುರಕೆ || ೧೮
ಕನಕಮಣಿನಿರ್ಮಿತದ ಸೌಧದಿ |
ಜನನಿಕರಸಂದೋಹದಲಿಯುಪ |
ವನದ ವೀಧಿಗಳೆಸೆಯೆ ಮೆಱೆವ ವಿದರ್ಭಪಟ್ಟಣಕೆ ||
ಮನವೊಲಿದು ನಿಜಬಳಗ ಸಹಿತಂ |
ಗನೆಯರೋಲಗದಲ್ಲಿ ಮದನನ |
ಮೊನೆಯಲಗಿನಲಿ ಬಳಲ್ವ ಸತಿಯಳ ಕಂಡುದಾ ಹಂಸೆ || ೧೯
ನೀಲಮಣಿಭಿತ್ತಿಗಳ ಕಂಭದ |
ಸಾಲು ವಜ್ರದ ಹಲಗೆ ಪಚ್ಚೆಯ |
ಮೇಲು ಮುತ್ತಿನ ಲೋವೆ ಹವಳದಿ ಕಡೆದ ಬೋದಿಗೆಯ ||
ಸಾಲು ಮಣಿನಿರ್ಮಿತದ ಮಂಚದ |
ಮೇಲೆ ಮಂಡಿಸಿ ನಳನ ಚಿಂತೆಯ |
ತಾಳಿದಂಗನೆ ಸತಿಯರೊಡನಿರೆ ಕಂಡುದಾ ಪಕ್ಷಿ || ೨೦

ಪೆಱೆನೊಸಲ ಕತ್ತುರಿಯ ತಿಲಕವ |
ಕೊರಳ ಮುತ್ತಿನ ಹಾರರತ್ನವ |
ಬೆರಳ ಮುದ್ರಿಕೆಗಳ ಸುವರ್ಣದ ಕರದ ಕಂಕಣದ ||
ಪರಿಪರಿಯ ಸಿರಿಯುಡಿಗೆಗಳ ನೂ |
ಪುರದ ತೊಡರಿನ ದೇಸಿ ಪರಿಮಿಗೆ |
ಬೆಳಸಿರಲು ತರುಣಿಯರು ಸತಿಯಳ ಕಂಡುದಾ ಹಂಸೆ || ೨

ತಳತ ಮೇಘದ ಹೊಳೆವ ಮಿಂಚಿನ |
ಬೆಳಗವೆನೆ ಹಂಸಗಳು ನಭದಿಂ |
ದಿಳಿಗಿಳಿದು ಸತಿಯರ ಸಭಾಮಂಡಲದಿ ಕುಳ್ಳಿರಲು ||
ನಳಿನಲೋಚನೆ ಕಂಡು ಪಕ್ಷಿಯ |
ಲಲನೆಯರ ಮೊಗನೋಡಿ ಹಂಸದ |
ಚೆಲುವನೀಕ್ಷಿಸಿ ಹಿಡಿಯಬೇಕೆಂದೆನುತ ಗಮಿಸಿದಳು || ೨.

ಮೆಲ್ಲಮೆಲ್ಲನೆಯಡಿಯಿಡುತ ಕರ |
ಪಲ್ಲವವ ಚಾಚಿದಳು ನೂಪುರ |
ಘುಲ್ಲುಘುಲ್ಲೆನೆ ಹಿಂದು ಹಿಂದಕೆ ಸರಿದುದಾ ಹಂಸ ||
ನಿಲ್ಲದಂಗೈಸುತ್ತ ಬರಲ |
ಲ್ಲಲ್ಲಿಗಡರಿತು ಕುಸುಮಮಯನವ |
ಮಲ್ಲಿಗೆಯ ಬನದೊಳಗೆ ಹೊಕ್ಕುದು ಹೊದಱ ಹೊಸಮೆಳೆಯ || ೨

ಕೆಳದಿಯರ ಕೆಲಕೊತ್ತಿ ತಾನೇ |
ಮೆಳೆಯ ಹೊಕ್ಕಳು ಬಾಗಿ ಸೆಳೆನಡು |
ಬಳುಕೆ ಕುಚಭಾರದಲಿ ಮೇಲುದು ಜಾಱೆ ಮುಡಿ ಚೆದಱೆ ||
ಜಲಜಮುಖಿ ಬೆಮರಿಡಲು ಕೊರಳಿನ |
ಲಲಿತದೇಕಾವಳಿಗಳಲ್ಲಾ |
ಡಲು ಸೆಱಗನಳವಡಿಸಿ ನಿಂದಳು ಬಳಲಿ ಬಿಸುಸುಯ್ದು || ೨

ಎಲೆ ಸರೋರುಹಗಂಧಿ ನೀನೆ |
ನ್ನೊಲಿದು ಮನದಲಿ ಹಿಡಿವೆನೆಂಬೀ |
ಛಲವಿದೇತಕೆ ಮಾಣು ನಾವಂಬರದ ಪಕ್ಷಿಗಳು ||

ಸಿಲುಕುವವರಾವಲ್ಲ ಬಱಿದೇ |
ಬಳಲದಿರು ತಾ ಬಂದ ಪರಿಯನು |
ತಿಳುಹುವೆನು ನಿನಗೆಲ್ಲವನು ಕೇಳೆಂದುದಾಪಕ್ಷಿ || ೩೫

ನಳಿನಮುಖಿ ನಳಚಕ್ರವರ್ತಿಯು |
ಬಳಿಯ ವಾಹನವಾಗಿ ತಾನಿಹೆ |
ನೊಲಿದು ಸಲಹುವನೆನ್ನ ಪರಮಪ್ರೀತಿವಚನದಲಿ ||
ಇಳೆಗೆ ನಳಕೂಬರಜಯಂತರ |
ಚೆಲುವ ಮದನನ ರೂಪುರೇಖೆಯು |
ಹಳಿವುದಾನಳನೃಪನ ನಿಜಸೌಂದರಿಯ ಲೋಕದಲಿ || ೩೬

ನಿನ್ನ ರೂಪಿನ ಚೆಲುವ ನಳನೃಪ |
ನುನ್ನತದ ಸೌಂದರಿಯ ಜಗದೊಳ್ |
ಗಿನ್ನು ನಾ ಸರಿಕಾಣೆ ನಿಮಗಿರ್ವರಿಗೆ ಸಮನಹುದು ||
ಎನ್ನಲಾನುಡಿಗೇಳಿ ಹಂಸಗೆ |
ತನ್ನ ಶಿರವನು ಬಾಗಿ ಗುಣಸಂ |
ಪನ್ನೆ ನುಡಿದಳು ನಾಚಿ ನಸುನಗೆಯಿಂದ ವಿನಯದಲಿ || ೩೭

ಪರಮಗುಣಸಿಧಿ ಪಕ್ಷಿ ಕೇಳ್ಬಾ |
ಹಿರನು ಪಾತಕಿ ಮದನನೆಲೆನಿ |
ಷ್ಠುರದೊಳೆಸೆಯಲು ಪುಷ್ಪಬಾಣದಿ ನೊಂದುದೆನ್ನೊಡಲು ||
ಕರುಣರಸಧಾರೆಯಲಿ ತಾಪವ |
ಪರಿಹರಿಸಬೇಕೆಂದು ನೀನಾ |
ಧರಣಿಪತಿ ನಳನೃಪಗೆ ಬಿನ್ನೈಸೆಂದಳಿಂದುಮುಖಿ || ೩೮

ಪರಮದುಃಖವ ಪರಿಹರಿಸಿ ಮಿಗೆ |
ಪರರಿಗುಪಕಾರಾರ್ಥವೆಸಗಲು |
ಪರಮಪುಣ್ಯವಿದೆಂದು ಪೇಳ್ವರು ಹಿರಿಯರಾದವರು ||
ಪರಮಬಾಂಧವ ನೀನೆನಗೆ ಸ |
ತ್ಕರಿಸು ವಿರಹದಿ ನೊಂದವಳ ಕರೆ |
ಕರೆಗೆ ಗುಱಿಮಾಡದಿರು ಸಲಹೆಂದಳು ಸರೋಜಮುಖಿ || ೩೯

ಬಲಿದ ವಿರಹಾಗ್ನಿಯಲಿ ನೊಂದೆನು |
ಬಳಲಿದೆನು ಹಿರಿದಾಗಿ ತಾಪದಿ |
ನಲವು ಹಿಂಗಿತು ಭ್ರಮಣೆ ಹೆಚ್ಚಿತು ಪ್ರಾಣವೆಳದಾಯ್ತು ||
ಹಲವು ಮಾತೇನಿನ್ನು ನಳನೃಪ |
ತಿಲಕ ತಾ ಪತಿಯಲ್ಲದೆಲೆ ಭೂ |
ತಳದ ಪುರುಷರು ಪಿತನ ಸಮ ಕೇಳೆಂದಳಿಂದುಮುಖಿ || ೪೬

ಅರಸ ಕೇಳಾಹಂಸ ತರುಣಿಯ |
ಕರುಣವಾತೆಯ ಕಂಡು ತಾ ಬಂ |
ದಿರುವ ಕಾರ್ಯದ ಹದನು ಲೇಸಾಯ್ತೆಂದು ಮನದೊಳಗೆ ||
ಹರುಷ ಮಿಗೆ ಕೊಂಡಾಡಿ ಸತಿಯಳ |
ಕರೆದು ಸುಖಿಸುದು ನಿನಗೆ ನಳಭೂ |
ವರನ ಪತಿಯನು ಮಾಳ್ಪೆನಂಜದಿರೆಂದುದಾ ಹಂಸೆ || ೪೭

ಅಂತರಂಗದ ಬುದ್ಧಿಯನು ದಮ |
ಯಂತಿಗೆಲ್ಲವನಱುಹಿ ತರುಣಿಯ |
ಸಂತವಿಟ್ಟಲ್ಲಿಂದ ಕಳುಹಿಸಿಕೊಂಡು ಬೇಗದಲಿ ||
ಮುಂ ತಳರ್ದು ಮಿಗೆ ತನ್ನ ಬಾಂಧವ |
ಸಂತತಿಯನೊಡಗೊಂಡು ನಿಷಧನ |
ಚಿಂತೆಯನು ಪರಿಹರಿಸಬೇಕೆಂದೈದಿತಾಹಂಸೆ || ೪೮

ಆಗ ನಳನೃಪಸಂಗ ದಕ್ಷಿಣ |
ಭಾಗ ಭುಜನಯನಂಗಳದುರಿದು |
ವಾಗ ಕೇಳಿದನಿದಱ ಫಲವೇನೆಂದು ಭೂಸುರರ ||
ಭೋಗಸುಖದರುಶನದ ಫಲದಿಂ |
ದೀಗಲಹುದೆನಲಾಸಮಯದಿ ಸ |
ರಾಗದಲಿ ನಡೆತಂದುದಾ ನೃಪನೆಡೆಗೆ ಕಳಹಂಸ || ೪೯

ಬಂದ ಹಂಸೆಯ ಕಂಡು ಮುಖಕಳೆ |
ಯಿಂದಲಱೆದನು ನೃಪತಿ ಮನದಲಿ |
ಯಿಂದುಮುಖಿ ತನಗೊಲಿದ ಹದನಹುದೆಂದು ಹರುಷದಲಿ ||

ಮಂದಗಮನೆಯು ಕಂಡಿರೇ ಪಿ |
ನೆಂದು ನುಡಿದಳು ಸತಿಯು ಬಗೆಯೇ |
ನೆಂದು ಕೇಳಲು ನೃಪಗೆ ಬಳಿಕಿಂತೆಂದುದಾ ಪಕ್ಷಿ || ೪೪
ಮಾನವಾಧಿಪ ಕೇಳು ಮನದನು |
ಮಾನವನು ಬಿಡು ಗುಡಿಯ ಕಟ್ಟಿಸು |
ನೀ ನೆನಸಿದಿಷ್ಟಾರ್ಥಫಲ ಸಿದ್ಧಿಸಿದುದಿನ್ನೇನು ||
ಮಾನನಿಧಿ ನೀ ಮುನ್ನ ಮಾಡಿದ |
ನೂನಸುಕೃತದ ಫಲವೊ ನಿನ್ನನೆ |
ಜಾನಿಸುವಳನವರತ ಮನ ಜೋಜಿಲ್ಲವಾಸತಿಗೆ || ೪೫
ಆ ತಳೋದರಿ ನಿನ್ನ ಮೇಲಣ |
ಪ್ರೀತಿಯಿಂದೊಲಿದಂತರಂಗದಿ |
ಕಾತರಿಸುತಿಹಳಂಗಭವನುಪಟಳದಿ ಕಡುನೊಂದು ||
ಧಾತುಗುಂದಿದಳಾತರುಣಿ ಮನ |
ಸೋತು ಹಂಬಲಿಸುವಳು ನಳನೃಪ |
ನಾತನೇ ಪತಿಯೆಂದು ನಂಬಿಹೆನೆಂವಳಿಂದುಮುಖಿ || ೪೬
ಎಲೆ ನೃಪತಿ ದಮಯಂತಿಯನು ನಿನ |
ಗೊಲಿಸಿ ಬಂದೆನು ಭಾಷೆ ಸಂದುದು |
ಲಲನೆಯನು ನೀ ಮದುವೆಯಾಗಿಂದೆನ್ನ ಕಳುಹೆನಲಾ ||
ಬಳಲಿದಿರಿ ನಮಗೋಸುಗವೆ ಬಲು |
ಹಳುವದಲಿ ಹಿರಿದಾಗಿ ಮನದಲಿ |
ತೊಳಲಿದಿರಿ ಸಾಕಿನ್ನು ಗಮಿಸಿಸಿಯೆಂದು ಬೀಳ್ಕೊಟ್ಟ || ೪೭
ಕೇಳು ಪಾಂಡವತನಯ ರಾಜನು |
ರಾಳ ತೆರಳಿದ ಬಳಿಕ ನಳಭೂ |
ಪಾಲನಿತ್ತಲು ಬಂದು ಪೊಕ್ಕನು ತನ್ನ ನಗರಿಯನು ||
ಆಳುಮಂದಿಯ ಕಳುಹಿ ಮನದ ವಿ |
ಶಾಲವಿರಹದ ತಾಪದಲಿ ಮಿಗೆ |
ಕೇಳಮೇಳವಿನೋದವಿಭವವನುಳಿದನಾನೃಪತಿ || ೪೮

ಅತ್ತಲಾದಮಯಂತಿ ನಳನಲಿ |
ಚಿತ್ತವಿಟ್ಟಳು ನೃಪಗೆ ವಿರಹವು |
ಹೊತ್ತಿತಾಕೆಯು ಮೇಲೆಯಿರ್ವರಿಗಾಯ್ತು ಸಂತಾಪ ||
ಚಿತ್ತಜನು ಘಾತಕನು ವಿರಹವ |
ಹೊತ್ತಿಸಿದನಿಬ್ಬರಿಗೆ ಮದನನ |
ಹೆತ್ತವನು ಪರಪುರದರಸ ಚೆನ್ನಿಗರಾಯ ಕರುಣಿಸಿದ || ೪೯

ಇಂತು ಸಂಧಿ ಎರಡು.

|| ಮೂಱನೆಯ ಸಂಧಿ. ||

ಸೂಚನೆ || ರಾಜಿಸುವ ವರಭೀಮಪುರದಲಿ |
ರಾಜನಳನೃಪ ಮದುವೆಯಾಗಿ ಸ |
ರಾಜತೇಜದಿ ಬಂದು ಹೊಕ್ಕನು ಪುರವ ಸತಿಸಹಿತ ||

ಕೇಳು ಧರ್ಮಜ ನಳನ ರೂಪನು |
ಕೇಳಲೀಪದನಾಯ್ತು ಸತಿಗೆ ನೃ |
ಪಾಲನಂಗವು ಗೋಚರಿಸಲೆಂತಹುದೊ ವಿರಹಾಗ್ನಿ ||
ನಾಲಗೆಗೆ ದ್ರವವಿಲ್ಲ ಮಂಚದ |
ಮೇಲೆ ಮಲಗಳು ಬಲಿದವಸ್ಥೆಯ |
ಹೇಳಲಿನ್ನೇನರಸ ದಮಯಂತಿಯ ಮನೋವ್ಯಥೆಯ || ೧

ಲಲನೆ ನಿದ್ರಾಂಗನೆಯನುಳಿದಳು |
ಹೊಲಬು ತಪ್ಪಿದ ಮನದಿ ಸತಿಯರು |
ಸುಳಿಯೆ ನಳನೃಪ ಬಂದನಿದೆಯೆಂದೆನುತ ಕಳವಳಿಸಿ ||
ನಿಲುಕಿ ನೋಡುವಳೊಮ್ಮೆ ಕಾಣದೆ |
ಹಲುಬುವಳು ಮತ್ತೊಮ್ಮೆ ಕಂಡದ |
ಕೆಳದಿಯರು ತಮ್ಮೊಳಗೆ ತಾವಾಲೋಚಿಸಿದರಲ್ಲಿ || ೨

ವಿರಹ ಬಲಿದುದು ಸತಿಗೆ ನಾವಿದ |
ನರಸಗಱುಹುವೆವೆಂದು ಕೆಳದಿಯ |
ರಿರದೆ ಬಂದರು ಭೀಮನೃಪನೋಲಗಕೆ ತವಕದಲಿ ||

ವರಕವಿಗಳಿಂದಿನದಿ ಧರಣೀ |
ಶ್ವರರು ಕೈವಾರಿಸಲು ಕೇಳಿದು |
ತರುಣಿ ವಿರಹಕೆ ತನುವ ತೆತ್ತಿಹಳೆಂದರಬಲೆಯರು || ೩

ಕೇಳಿದನು ನಸುನಗುತ ಭೀಮನೃ |
ಪಾಲ ತನ್ನಾತ್ಮಜೆಯ ಯೌವನ |
ದೇಳಿಗೆಯನಾಲಿಸುತ ವರನಾರೆಂದು ಚಿಂತೆಯಲಿ ||
ಓಲಗಕೆ ನಡೆತಂದು ಬರಸಿದ |
ನೋಲೆಗಳ ಕಳುಹಿದನು ಧರಣೀ |
ಪಾಲಕರ ಬರಹೇಳೆನುತ ಹೊಯಿಸಿದನು ಡಂಗುರವ || ೪

ಹರಿವರರಸಾಳುಗಳು ದಿಕ್ಕ್ಕಗ |
ಳರಸುಗಳ ನಗರಿಗಳಗತ್ತಲು |
ಪುರವ ಶೃಂಗರಿಸಿದರು ಭೀಮನೃಪಾಲನಾಜ್ಞೆಯಲಿ ||
ತರಿಸಿದರು ಭಂಡಾರದಲಿ ನವ |
ಭರಿತವಾದ ಸುವಸ್ತುಗಳ ವಿ |
ಸ್ತರಿಸಿ ಕಟ್ಟಿದರಗಲದಲಿ ವೈವಾಹಮಂಟಪವ || ೫

ಹೊಳೆವ ದಂತದ ಕಂಭಗಳ ಪು |
ತ್ತಳಿಯ ಸಾಲಿನ ಮೇಲುಕಟ್ಟಿನ |
ತಳಿರ ತೋರಣದೋರಣದ ಲೋವೆಗಳ ಅರಳೆಲೆಯ ||
ಬಿಳಿಯ ಮುತ್ತಿನ ಸರದ ಪವಳದ |
ಬಿಳಿಯ ಚೌರಿಯ ಮೇಲುಕಟ್ಟಿನ |
ಹೊಳಹು ಮಿಗೆ ರಚಿಸಿದರು ಸತಿಯ ವಿವಾಹಮಂಟಪವ || ೬

ಓರಣದ ಬೀದಿಗಳ ಸಾದಿನ |
ಸಾರಣೆಯ ಕತ್ತುರಿಯ ಮಿಗೆ ಪ |
ನ್ನೀರ ಚಳೆಯದ ಪರಿಮಳದ ಕುಂಕುಮದ ಕಾರಣೆಯ ||
ತೋರಣದ ತಳಿಗೆಗಳ ಘನಶೃಂ |
ಗಾರ ಮೆರೆದಿದಿರೆ ಕೇರಿಕೇರಿಯ |
ವಾರನಾರಿಯರಿಂದ ಸಂದಣಿಸಿತು ವಿದರ್ಭಪುರ || ೭

ಮಾಳವಾಂಧ್ರ ಕಳಿಂಗ ಕೋಸಲ |
ಚೋಳ ಮತ್ಸ್ಯ ವರಾಳ ಕೊಂಕಣ |
ಗೌಳ ಕುಂತಳ ಮಗಧ ಬರ್ಬರ ಪಾಂಡ್ಯ ಕರ್ಣಾಟ ||
ಲಾಳ ವಂಗ ಸುರಾಷ್ಟ್ರ ಕುರು ನೇ |
ಪಾಳ ಘೂರ್ಜರ ಸಿಂಧು ಮರು ಪಾಂ |
ಚಾಳ ಮೊದಲಾದಖಿಳಧರಣೀಪಾಲರೈದಿದರು || ೮
ಧರಣಿವಳಯದಿಗಂತದವನೀ |
ಶ್ವರರು ಭೂಸುರಸಿದ್ಧವಿದ್ಯಾ |
ಧರರು ವಸುಕಿಂಪುರುಷಸುಜನರು ಮಲ್ಲಗಾಯಕರು ||
ಪರಮುರುಷಿಗಳು ಪಂಡಿತರು ಕವಿ |
ವರರು ನಟಗಾಯಕರು ದೈವ |
ಜ್ಞರು ಗಣಕಸಂದೋಹ ಮಿಱಿದುದು ರಾಯ ಕೇಳೆಂದ || ೯
ಆಸಮಯದಲಿ ನಾರದನು ಹರಿ |
ವಾಸುದೇವಾಯೆಂಬ ಪಠನವಿ |
ಲಾಸಗಳ ವೀಣೆಯಲಿ ನುಡಿಸುತ ಮುನಿಗಳೊಗ್ಗಿನಲಿ ||
ವಾಸವನ ಸಭೆಗೈತರಲು ಸಂ |
ತೋಷದಿಂದಿದಿರೆದ್ದು ಘನಸಿಂ |
ಹಾಸನದಿ ಕುಳ್ಳಿರಿಸಿ ಕೈಮುಗಿದೆಂದನಮರೇಂದ್ರ || ೧೦
ಎತ್ತಣಿಂದೈತಂದಿರುರ್ವಿಯೊ |
ಳುತ್ತಮರು ಧರಣೀಶರಲಿ ನೆರೆ |
ಸತ್ಯಧರ್ಮಸುಶೀಲರಾರುಂಟಲ್ಲಿ ಗುಣವೇನು ||
ಚಿತ್ತವಿಸಿ ಮುನಿನಾಥಯೆನಗದ |
ಬಿತ್ತರಿಸಿ ಪೇಳೆನಲು ಸುರಮುನಿ |
ಚಿತ್ತದಲಿ ನಸುನಗುತ ನುಡಿದನು ಪಾಕಶಾಸನಗೆ || ೧೧
ಅಮರಪತಿ ಕೇಳವನಿಯಲಿ ಭೂ |
ರಮಣರುಂಟು ಅನೇಕವವರೊಳು |
ನಿಮಗೆ ಪೇಳ್ವೆ ವಿದರ್ಭಪುರಪತಿ ಭೀಮನೃಪತನುಜೆ ||

ಕಮಲಮುಖಿ ದಮಯಂತಿಗೆವ್ವನ |
ಸಮತಳಿಸಲುಚಿತದಿ ಸ್ವಯಂವರ |
ಕಮಿತಬಲನೃಪರೈದಿ ಬರುತಿಹ ಧರಣಿಯುಗಲದಲಿ || ೧೨
ಅಲ್ಲಿ ನೆರೆದ ಸಮಸ್ತ ಧರಣೀ |
ವಲ್ಲಭರನೇನೆಂಬೆ ಪಟ್ಟಣ |
ವೆಲ್ಲ ನೆಱೆದುದು ದೇಶದೇಶಾಂತರದ ಯಾಚಕರು ||
ನಿಲ್ಲದೈತರುತಿಹ ವಿವಾಹವ |
ನಲ್ಲಿ ನೋಡುವೆವೆನುತ ಮುನಿ ಕರ |
ಪಲ್ಲವದ ವೀಣೆಯಲಿ ಹಂಸವನೇಱಿ ಹೊಱಪಟ್ಟ || ೧೩
ಅರಸ ಕೇಳಮರೇಂದ್ರನಾ ಮುನಿ |
ವರನ ವಚನವ ಕೇಳಿ ಹೆಚ್ಚಿದ |
ವಿರಹದಲಿ ಕರಸಿದನು ಸತಿಯರಿಗೆಂದಪೇಹದನ ||
ಪರಮಸತಿ ದಮಯಂತಿಯಳನುಪ |
ಚರಿಯದಲಿಯೊಳಗೊಲಿಯ ವಾಣಿಂ |
ದುರುತರದ ವಸ್ತುಗಳನಿತ್ತು ಬಳೆಯರ ಬೀಳ್ಕೊಟ್ಟ || ೧೪
ತರಿಸಿಯೋಱದ ದಿವ್ಯರಥವನು |
ಕರಸಿದನು ಯಮವರುಣವಾಯು |
ವ್ಯರುಸಹಿತ ಹೊಱಪಟ್ಟನಮರಾವತಿಯನಮರೇಂದ್ರ ||
ಧರೆಗಿಳಿದು ಬರೆ ಮುಂದೆ ಮಾರ್ಗದಿ |
ಸ್ಮರನ ರೂಪಿನ ನೈಷಧನ ಕಂ |
ಡರು ಮನೋರಾಗದಲಿ ಕಾಣಿಸಿಕೊಂಡರುಚಿತದಲಿ || ೧೫
ನಳನಮಿತ್ರನ ತೇಜದಿಂ ಧರೆ |
ಗಿಳಿವ ಮಹಿಮರ ಕಂಡು ಭರದಿಂ
ದಿಳೆಗಿಳಿದು ಭಕ್ತಿಯಲಿ ನಳ ಕೈಮುಗಿದು ನಿಂದಿರಲು ||
ತಳಿತ ಹರುಷಾನಂದದಲಿ ಬರ |
ಸೆಳೆದು ಬಿಗಿಯಪ್ಪಿದರು ರಾಯನ |
ಚೆಲುವನೀಕ್ಷಿಸಿ ನಲಿದು ಕೊಂಡಾಡಿದರು ಮನವೊಲಿದು || ೧೬

ಕುಶಲವೇ ನಳನೃಪತಿ ಭಾರ್ಯೆ |
ಶಶಿಕುಲೋದ್ಭವ ನಿನ್ನ ಪಿತನೀ |
ವಸುಧೆಗಧಿಪತಿ ವೀರಸೇನನು ಪರಮಸುಖನೆಮಗೆ ||
ಒಸೆದು ಬೇಡುವ ಕಾರ್ಯವಿಮು ಭರ |
ವಸದಿ ಬಂದೆವು ನಮಗೆ ಫಲಸಿ |
ದ್ಧಿಸಿದುದುಪಕಾರಾರ್ಥ ನಿನ್ನಿಂದಾಗಬೇಕೆಂದ ||
ಕರಿಗಮನ ಚಿತ್ತವಿಸು ನಾವೇ |
ನರರು ನಿಮಗಂತರವೆ ಸಾಕಂತಿ |
ರಲಿ ನಿಮ್ಮ ಪದಾಬ್ಜದರುಶನವಾಯಿತಿಂದಿನಲಿ ||
ಹರುಷದಿಂದೆನಗೇನು ಬುದ್ಧಿಯು |
ಕರುಣಿಸುವಿರದ ಮಾಳ್ಪೆನೆನೆ ಶಚಿ |
ಯುರಸನಾನುಡಿಗೆ ನಗುತಿಂತೆಂದನಾನೃಪಗೆ ||
ಭೂತಳದೊಳಿಪ ಸತಿಯುರಲಿ ರೂ |
ಪಾತಿಶಯ ದಮಯಂತಿಯೆನಲಾ |
ಮಾತಿನಲಿ ಮನವೊಲಿದುದವಳಲ್ಲಿ ನೀ ಪೋಗಿ ||
ಆತಳೋದರಿಗುಚಿತವಚನ |
ಪ್ರೀತಿಪೂರ್ವಕದಿಂದ ಸತಿಯುಳ |
ನೀ ತಿಳುಹಿಯನುಕೂಲವನು ಮಾಡೆಂದನಮರೇಂದ್ರ ||
ಈತ ಪಿತೃಪತಿಯಮರಪತಿ ತಾ |
ನೀತ ವರುಣನು ವಾಯುವೀತನು |
ಮಾತ ಮನ್ನಿಸು ಮಾಡು ತನಗುಪಕಾರವನು ನೀನು ||
ಈತವಾಕ್ಷಣದೃಶ್ಯವರವನು |
ಪ್ರೀತಿಯಿಂದೊಲಿದಿತ್ತವಿಂದಿನೊ |
ಳಾತಳೋದರಿಯೊಲಿವ ಹದನನು ಮಾಡು ಹೋಗೆಂದ ||
ಕೇಳಿದಾಮಾತಿನಲಿ ಚಿಂತೆಯ |
ತಾಳಿದನು ಚಿತ್ತದಲಿ ನಳನೃಪ |
ಲೋಲಲೋಚನೆ ತನ್ನನೇ ಪತಿಯೆಂದು ಬಯಸಿಹಳು ||

ಆ ಲತಾಂಗಿಯು ಮೇಲೆ ಪರಮವಿ |
ಶಾಲಮನವಿಹುದಿನ್ನು ಶಿವಶಿವ |
ಬಾಲಕಿಯು ಬೆಸಗೊಳಲು ನಾಲಗೆಯೆಂತು ತನಗೆಂದ || ೨೧
ಎಂದು ಮನದೊಳು ಮುಱುಗಿ ವಿನಯದೊ |
ಳೆಂದನೆಲೆಯಮರೇಂದ್ರ ನಿಮಗಾ |
ಮುಂದಗಮನೆಯನೊಳಗುಮಾಡೆಂದೆನಗೆ ಪೇಳ್ವರಲ ||
ಹಿಂದುಗಳೆದರೆ ಮನಕೆ ಖತಿ ನಿಮ |
ಗಿಂದು ಬಾರದೆ ಬಿಡದು ಲೋಕದಿ |
ಯಿಂದುಮುಖಿಯರ ಗುಣವ ತಿಳಿಯಲಸಾಧ್ಯ ಕೇಳೆಂದ || ೨೨
ಆ ಯುವತಿಯರು ಕಾರ್ಯಗತಿಗಳ |
ಬೀಯಮಾಳ್ಪರು ಕುಟಿಲವಿದ್ಯದಿ |
ಮಾಯೆಗಳ ಹಣ್ಣುವರು ಸತ್ಯದಿ ಹುಸಿಯನಾಡುವರು ||
ಕಾಯುವಳಿದರು ಅಂತರಂಗವ |
ಬಾಯ ಬಿಡರನ್ಯಾಯಮಾಡುವ |
ರಾಯತಾಕ್ಷಿಯರಂಗವಿದು ಸುರರಾಜ ಕೇಳೆಂದ || ೨೩
ಕಪಟವನು ಬಿಡರಾತ್ಮಬುದ್ಧಿಯೊ |
ಳುಪಮೆಗಾಣದೆ ನುಡಿದು ಪೊಳೆವರು |
ಚಪಲಚಿತ್ತದಿ ಮನವ ವಂಚಿಸಿ ಮಾತನಾಡುವರು ||
ಗುಪಿತವಳವಡರಾಪ್ತರೊಡವೆಯ |
ನಪಹರಿಸಿ ಸಾಹಸದಿ ಮುಱಿವರು |
ನಿಪುಣೆಯರಗಿದು ಸಹಜಗುಣವಮರೇಂದ್ರ ಕೇಳೆಂದ || ೨೪
ಸಾವಿಗೆಣಿಸರು ಮನದಿ ಸತ್ಯವ |
ಭಾವಿಸರು ಹುಸಿಯೊಲುಮೆದೋಱುವ |
ರಾವ ಪರಿಯಲಿ ಹೃದಯಗೊಡರನೃತಗಳನಾಡುವರು ||
ವಾವಿವರ್ತನವಿಲ್ಲ ಸತ್ಯಕೆ |
ಪಾವಕನ ಮುಟ್ಟುವರು ಸತಿಯರ |
ನಾವ ಪರಿಯಲಿ ನಂಬಬಹುದೈಯೆನುತೆ ಪೊಱುವಂಟ || ೨೫

ನಲವು ಹಿಂಗಿದ ಮನದಿ ನೃಪ ಮಾ |
ರ್ಗಲವನಲ್ಲಿಯೆ ನಿರಿಸಿ ಬರುತಿರೆ |
ತಳಿತ ರತ್ನಪ್ರಭೆಯ ಸಾಲಿನ ಸೌಧಪಙ್ಕ್ತಿಗಳ ||
ಹೊಳೆವ ಕಲಶದ ಗೋಪುರದ ಕೊ |
ತ್ತಳವ ಸಾಲಿನ ಕೋಟೆಯನು ಕಂ |
ಡಲಘುಭುಜಬಲನೃಪತಿ ಹೊಕ್ಕ ವಿದರ್ಭಪಟ್ಟಣವ || ೨೬

ಅರಮನೆಯ ಬಾಗಿಲಿಗೆ ಬರಲಿ |
ತ್ತರದ ವೇದಿಕೆಗಳಲಿ ಪಟುಭಟ |
ರುರುತರದ ಕೈದುಗಳ ಕಾಹಿನ ದಾರವಟ್ಟದಲಿ ||
ಇರಲು ಕಂಡಾತರುಣಿಯರು ಸಂ |
ಚರಿಸುತಿಹ ಸಡಗರವ ನಳಭೂ |
ವರನವೃದ್ಧರೂಪಿನಲಿಯೊಳಹೊಕ್ಕನರಮನೆಯ || ೨೭

ಆಗಲಾದಮಯಂತಿ ಚಿತ್ರದ |
ಬಾಗಿಲುಪ್ಪರಿಗೆಯಲಿ ರತ್ನದ |
ತೂಗುಮಂಚದ ಹಾಸಿನಲಿ ಕುಳ್ಳಿರಲು ಕೆಳದಿಯರು ||
ಆ ಗರುವೆಯೋಲಗದೊಳಿರುತಿರೆ |
ಹೂಗಣೆಯನೆಸುಗೆಯಲಿ ನಳ ಚರಿ |
ದಾಗಮದ ಕಥನಗಳ ತಾನಾಲಿಸುತ ಚಿತ್ತದಲಿ || ೨೮

ಬಂದರಲ್ಲಿಗೆ ಸುರಪ ಕಳುಹಿದ |
ಮಂದಗಮನೆಯರಖಿಳವಸ್ತುವ |
ತಂದು ಕಾಣಿಕೆಗೊಟ್ಟು ಕೈಮುಗಿದೆರಗಿ ನಿಂದಿರಲು ||
ಬಂದ ಸತಿಯರ ನೋಡಿ ನೀವೆ |
ಲ್ಲಿಂದ ಬಂದಿರಿ ನಿಮ್ಮ ಹದನೇನೆಂದು |
ಬೆಸಗೊಳೆ ನಗುತ ವಿನಯದಿಂದರುಹಿದರು ಮಾನಿನಿಗೆ || ೨೯

ತಾಯೆ ಕೇಳಮರೇಂದ್ರ ನಿಮ್ಮನಿ |
ಜಾಯತದ ಚೆಲುವಿಕೆಯ ಕೇಳಿದು |
ಕಾಯಜನ ಶರಹತಿಗೆ ನೊಂದುಱಿ ಕಳುಹಿದನು ನಮಗೆ ||

ಆಯುತದ ಭೂಷಣವ ತೊಡು ಸುರ |
ರಾಯನಿಗೆ ಸತಿಯಾಗು ಮರ್ತ್ಯನ |
ರಾಯರಸ್ಥಿರನರರ ನೆಚ್ಚದಿರೆಂದರಾಸತಿಗೆ ‖ ೩೦
ಪದವಿಯಾವುದು ಲೋಕದಲಿ ಸುರ |
ಪದವಿಯಲ್ಲದೆ ಬೇಱೆ ಮಿಕ್ಕಿನ |
ಪದವಿಯುಂಟೇ ತಾಯೆ ಭಾವಿಸಿ ನೋಡು ಚಿತ್ತದಲಿ ‖
ಸದರವೇ ನರಜನ್ಮದವರಿಗೆ |
ಯೊದಗಲಱಿಯದು ಪುಣ್ಯನಿನಗಿದು |
ಸುದತಿ ಕರುಣಿಸು ಮಾತನೆಂದರು ನಗುತ ರಂಭೆಯರು ‖ ೩೧
ಅಲರ ಪರಿಮಳದೆಡೆಗೆ ತುಂಬಿಗ |
ಳೊಲಿದು ಪೋಪಂದದಲಿ ಲೋಕದೊ |
ಳಲರು ತಾ ಪಾರೈಸಿ ಪೋಪುದೆ ತುಂಬಿಯಿದ್ದೆಡೆಗೆ ‖
ಸಲೆ ತವಕದಿಂದಮರಪತಿಯೆಡೆ |
ಗೊಲಿದು ನೀ ಪೋಪಂತೆ ಸುರಪತಿ |
ನಲವಿನಿಂದಲಿ ನಿನ್ನ ಬಳಿಗೈದಿದರೆ ಪುಣ್ಯವಲಾ ‖ ೩೨
ಎನಲು ಕೇಳಿದಳಾಸತಿಯು ಸುರ |
ವನಿತೆಗೆಂದಳು ಚಿತ್ತವೆನಗೊ |
ಬ್ಬನಲಿ ಸಿಲುಕಿತು ಮರಳಿಸದೆ ಕಮಲಾಕ್ಷಿಗಳವಲ್ಲ ‖
ಅನಿಮಿಷಾಧಿಪ ತನಗೆ ಬೇಡಾ |
ಗನೆಯರಿರುತಿರೆ ಮನುಜಸತಿ ಪಾ |
ವನವೆ ಬಱಿದೆ ದುರಾಸೆ ತನಗೇಕೆಂದಳಿಂದುಮುಖಿ ‖ ೩೩
ಮರಳಿವರು ಪೂರ್ವಾಚಿಯರಿತ್ತಲು |
ಬರುತೆ ನಳನೃಪತಿಲಕ ತಾ ಮನ |
ಹರುಷದಲಿ ನಿಜರೂಪ ತಾಳ್ದನು ರಾಜತೇಜದಲಿ ‖
ಅರಸನಿರೆ ದಮಯಂತಿ ಕಂಡ |
ಚ್ಚರಿಯು ಮದನನೊ ನಳನೊ ನಳಕೂ |
ಬರನೊ ಜಯಂತನೊ ಎನೆ ವಿಸ್ಮಯಗೊಂಡಳಾತರುಣಿ ‖ ೩೪

ಎಂದು ಸಂತೋಷದಲಿ ನಾರೀ |
ವೃಂದ ಸಹಿತಿದಿರೆದ್ದು ವಿನಯದಿ |
ನಿಂದು ಕರಗಳ ಮುಗಿದು ಸಿಂಹಾಸನದಿ ಕುಳ್ಳಿರಿಸಿ ||
ತಂದು ಮುಕ್ತಾಫಲಗಳನು ಮುದ |
ದಿಂದ ಕಾಣಿಕೆಯಿತ್ತು ಸತಿಯುರ |
ಸಂದಣಿಯು ಕೆಲಕೊತ್ತಿ ನುಡಿದಳು ಮಧುರವಚನದಲಿ || ೩೫

ಆರು ನೀವೆಲ್ಲಿಂದ ಬಂದಿರಿ |
ಕಾರಣವಿದೇನೆಮ್ಮ ರಾಜ |
ದ್ವಾರದಲಿ ನೀವ್ ಹೊಕ್ಕ ಪದನೇನಿಲ್ಲಿ ಗಂಡುನೊಣ ||
ಸೇರಲಮ್ಮದು ನೀವಘಾತದ |
ವೀರರತಿಸೌಂದರ್ಯರೆನೆ ನಳ |
ಭೂರಮಣ ನಸುನಗುತ ನುಡಿದನು ಸತಿಗೆ ವಿನಯದಲಿ || ೩೬

ತರುಣಿ ಕೇಳಮರೇಂದ್ರನಟ್ಟಿದ |
ಚರನು ತಾ ಮಿಗೆ ನಿನ್ನ ರೂಪನು |
ಸುರಮುನಿಪನಱುಹಿದರೆ ಕೇಳಿದನಿಂದ್ರ ವಿರಹದಲಿ ||
ಕರಗಿ ಮದನನ ಶರಹತಿಗೆ ಮನ |
ಮಱುಗಿ ಬಂದಿಹನಿಲ್ಲಿಗಾತಂ |
ಗರಸಿಯಾಗೆನೆ ಕೇಳಿ ಮುಱದಿರುಹಿಳು ದಮಯಂತಿ || ೩೭

ಬಲ್ಲವರು ನೀವಧಿಕರೆಮ್ಮೊಳು |
ಸಲ್ಲದೀನುಡಿಯೆಂತಕಿನು ಶಚಿ |
ವಲ್ಲಭನ ಮಾತೇನು ಸಾಕಂತಿರಲಿಯೆನಗಿನ್ನು ||
ವಲ್ಲಭನು ನಳನೃಪತಿಯಲ್ಲದೆ |
ನಲ್ಲರುಂಟೇಜಗದಿ ನೀವ್ ಸುರ |
ರಲ್ಲ ನಿಮ್ಮಭಿಧಾನವೇನೆಂದಳು ಸರೋಜಮುಖಿ || ೩೮

ದೂತರಲಿ ಕುಲಗೋತ್ರಗಳ ನೀ |
ನೇತಕಱಸುವೆ ತರುಣಿಯಿಂದ್ರನು |
ಖ್ಯಾತಪುರುಷನು ಬಯಸುವುದು ಕೃತಪುಣ್ಯೆ ನಿನಗೈಸೆ ||

ಭೂತಳದ ನರರಧಿಕರೇ ಸಂ |
ಪ್ರೀತಿಯೇಕವರಲ್ಲಿ ಬಿಡು ಪುರು |
ಹೂತನನು ಕೈ ವಿಡಿದು ನೀ ಸುಖಿಯಾಗು ನಡೆಯೆಂದ || ೩೯

ಇಳೆಯ ಮರ್ತ್ಯರು ನಾಕನಿಳಯರಿ |
ಗಳವೆಯಂತವರಲ್ಲ ನುಡಿಯಲು |
ಕುಲಗಿರಿಗೆ ನೊರಜಂತರವೆ ನೀ ನೋಡು ಚಿತ್ತದಲಿ ||
ನಳನೃಪನ ಬಯಸುವತೆ ನಿನಗವ |
ನೊಲಿವನೇ ಧಾತ್ರೀಶರೊಳಗ |
ಗ್ಗಳನೆ ಸಾಕೆಂದೆನಲು ಕನಲಿದು ನುಡಿದಳಾತರುಣಿ || ೪೦

ಮಾನವಾಧೀಶ್ವರರೊಳಗೆ ಸನು |
ಮಾನವುಳ್ಳವ ಸತ್ಯಸಂಧ ನಿ |
ಧಾನಿ ಹಿಮಕರವಂಶಪಾವನ ಸಾರ್ವಭೌಮನಲಾ ||
ಆನರೇಂದ್ರಗೆ ಸರಿಯೆ ಮನುಮುನಿ |
ದಾನವಾಮರರಿನ್ನು ನಿಮಗೀ |
ಹೀನವೃತ್ತಿಯು ಮಾತದೇಕೆಂದಳು ಸರೋಜಮುಖಿ || ೪೧

ನಿಷಧಪತಿಯೇ ಪತಿಯೆನುತ ಭಾ |
ವಿಸಿದೆನಾತನ ಕರುಣವೆನ್ನಲಿ |
ಪಸರಿಸಿದಡಮ ಲೇಸು ಲೇಸಲ್ಲದೊಡೆ ನಳನೃಪಗೆ ||
ಅಸುವ ತೆಱುವೆನು ನನ್ನ ಫಲ ನಿ |
ದ್ಧಿಸಲಿ ನಿಜಸಂಕಲ್ಪವೆಂದಾ |
ಶಶಿವದನೆ ಕಂಬನಿಯ ಮಿಡಿದಳು ಸಭೆಯ ಕೊನೆಯಲ್ಲಿ || ೪೨

ಕರಗಿತಂತಃಕರಣ ನೃಪತಿಗೆ |
ಸರಸಿಜಾಕ್ಷಿಯ ದೃಢವ ಕಂಡನು |
ಕರುಣಲತೆ ಕುಡಿವೊಡೆದತಾಕ್ಷಣ ನುಡಿದನಾಸತಿಗೆ ||
ಸರಸಿಜಾನನೆ ಕೇಳು ತಾನೇ |
ಧರಣಿಪತಿ ನಳನೆನಲು ಲಜ್ಜಿಸಿ |
ಶಿರವ ನಸುಬಾಗಿಸುತಲವಳಿಂತೆಂದಳಾನೃಪಗೆ || ೪೩

ನಾಕನಿಳಯರು ಕುಟಿಲವಿಪ್ರರ |
ನೇಕಮಾಯಾವಿದರು ಧರೆಯೊಳು |
ಪ್ರಾಕೃತರು ನಾವ್ ನಿಮ್ಮ ನಂಬಿದ ಪರಿಯಹೆಂಪೆನಗೆ ||
ನಾಕು ಮನ ನಂಬುವರೆ ಹೆದಯುವ |
ಜೋಕೆಯಲಿ ಕುಬುಹೆನಗೆ ತೋಱಿಸಿ |
ಲೋಕಮುಲಶೋಚನೆಗೆ ನುಡಿದನು ನೃಪ ನಿದರ್ಶನವ || ೪೪

ವನಜಮುಖಿ ನಿನ್ನಂತರಂಗದ |
ಮನವ ಕಾಣುವ ಬಗೆಯೊಳಾನಿಂ |
ದಿನಲಿಯನಿಮಿಷನೆಂದು ಹೇಳಿದೆಯಿದಱ ತಪ್ಪೇನು ||
ಮನದ ಸಂಶಯವೇನು ಹಂಸೆಯು |
ನಿನಗೆ ಕಳುಹಿದ ರಾಯಭಾರವ |
ವನಿತೆ ನೀನಿದ ತಿಳಿದು ನಂಬುವುದೆನ್ನ ನೀನೆಂದ || ೪೫

ನಳನೆನಲು ತನು ಪುಳಕಜಲದಲಿ |
ಮುಳುಗಿ ಹೊಂಪುಳಿಯಾಗಿ ತನ್ನಯ |
ಕೆಳದಿಯರ ಮುಱಿಗೊಂಡು ಹರುಷದ ಹೃದಯಭಿಂತಿಯಲಿ ||
ತೊಲಗಿದಳು ನೃಪನಿತ್ತ ಪುರವನು |
ಕಳಿದು ಬಂದನು ಮನದ ವಿರಹದಿ |
ಬಳಲುತಿಹ ದೇವೇಂದ್ರನೆಡೆಗೈತಂದನೊಲವಿನಲಿ || ೪೬

ಬಂದು ಭಯಭಕ್ತಿಯಲಿ ನಳನೃಪ |
ನಿಂದ್ರಮಾರುತಯಮವರುಣರಿಗೆ |
ವಂದಿಸುತ ದಮಯಂತಿ ಹೇಳಿದ ಮಾತ ವಿವರಿಸಲು ||
ಬಂದು ನಿನ್ನಲಿ ಕುಟಿಲವಿಲ್ಲದ |
ವಿಂದವನನೆಯರಿಂದ ಕೇಳಿದೆ |
ವೆಂದು ಸಂತೈಸಿದರು ಭಯಗೊಂಡಿಹ ನೃಪಾಲಕನ || ೪೭

ನಳಿನಮುಖಿಯರ ಕಪಟಚಿತ್ತವ |
ತಿಳಿಯಲಾರಿಗೆ ಸಾಧ್ಯ ಕೇಳ್ಯೆ |
ನಳನೃಪತಿ ನಮಗಾಗಿ ಬಳಲಿದೆಯೆನುತಲುಪಚರಿಸಿ ||

ಬಲಿದು ಭೂಷಣವಿತ್ತು ಕಳುಹಿದ
ರಿಳೆಯವಲ್ಲಭನಲ್ಲಿತಾವ್ತ |
ಪ್ಮೊಳಗೆಯಾಲೋಚಿಸಿದರಾಯಿಂದ್ರಯಮವರುಣರು || ೨೮
ಲಲನೆಯೊಲಿದ್ದವಕೆನ್ನು ವಿಪನಿದು |
ಪಲವು ಮಾತೇನೆಂದು ನಾಲ್ವರು |
ನಳನ ರೂಪನು ತಾಳ್ದಿರಿತ್ತಲು ಧರಣಿವಲ್ಲಭರು |
ನಲಿದು ಬರುತಿರೆ ಸ್ವರ್ಗಮರ್ತ್ಯದ |
ವಳಿಯ ಸುಜನರು ಸಿದ್ಧಕಿನ್ನರ |
ರುಲಿಯೆ ಗುಹ್ಯಕಗರುಡಗಂಧರ್ವಾಮರೇಂದ್ರರಲಿ || ೨೯
ನೆರೆದುದಗಣಿತದರಸುಗಳು ಕರಿ |
ತುರಗರಥಪಾಯ್ದಳದ ಸಂದಣಿ |
ಮೊಳೆವ ಶಂಖವಾದ್ಯದಂಗತಂಬಟಭೇರಿನಿಸ್ಸಾಳ ||
ಉರುಚಿತ್ರಲ್ಲಿ ವಿದರ್ಭಪುರಪತಿ
ಧರಿಸಲಾಸನೆ ಪರಮವಾದ |
ವರಸ ಬಣ್ಣಿಸಲಜನಿಯೆ ನೋಡಿದ ಮಹಾಮಹೀಸುರರ || ೩೦
ಅವರವರ ಕರೆಕರೆದು ವಿನಯದೆ |
ಳವರವರ ಮರಿಯಾದೆಯಿಂದಲೆ |
ಳವರವರ ಸತ್ಕರಿಸಿ ಕುಳ್ಳಿರಿಸಿದನು ಭೀಮನೃಪ ||
ಅವರವರಿಗುಚಿತೋಪಚಾರದೊ
ಳವರವರ ಮನ್ನಿಸುತಲಿರ್ದನು |
ಭುವನಪತಿಗಳನೇಕರನು ಸಭೆಯೊಳಗೆ ಕಂಡ | ೩೧
ಒಂದು ಕಡೆಯಲಿ ತಾಳಮದ್ದಳ |
ವೊಂದು ಕಡೆಯಲಿ ಸರಸನೃತ್ಯಗ |
ಳೊಂದು ಕಡೆಯಲಿ ಸಾರತರಸಂಗೀತಸಾಹಿತ್ಯ |
ಒಂದುಕಡೆಯಲಿ ಗದ್ಯಪದ್ಯಗ |
ಳೊಂದು ಕಡೆಯಲಿ ತರ್ಕಶಾಸ್ತ್ರಗ |
ಳೊಂದು ಕಡೆಯಲಿ ಹಾಸ್ಯದಿಂದಿರುತಿರ್ದರಾಸ್ಥಾನ ೩೨

ಇತ್ತಲಾದಮಯಂತಿಗೆಣ್ಣೆಯ |
ನೊತ್ತಿದರು ಶೋಭಾನಗಳ ಪಾ |
ಡುತ್ತಗೆಲಿದರು ತಿಗುರು ಮಿಗೆ ವಿವಿಧೋಪಚಾರದಲಿ ||
ಉತ್ತಮಾಂಗನೆಗಳವಡಿಸೆ ನಲಿ |
ಯುತ್ತ ಸತಿಯರು ಮಜ್ಜನದ ಮನೆ |
ಗತ್ಯಧಿಕಹರುಷದಲಿ ದಮಯಂತಿಯನು ಕರೆದೊಯ್ದು ||
ಜೆರಸಿದರು ಪನ್ನೀರ ಹೊಂಗೊ |
ಪ್ಪರಿಗೆಯಲಿ ಮೊಗೆಮೊಗೆದು ನಾರಿಯ |
ರೆಱೆದರಂಗನೆಗಮಳಚಂದನಗಂಧಪರಿಮಳವ ||
ತರುಣಿಯರು ಲೇಪಿಸಿದರರಸಿಗೆ |
ವರದುಕೂಲಾಭರಣಗಳ ಶೃಂ |
ಗರಿಸಿದರು ದಮಯಂತಿಯೊಪ್ಪಿದಳಧಿಕತೇಜದಲಿ ||
ಮಡದಿಯರು ಬಳಸಿದರು ಸುತ್ತಲು |
ಹಡಪಚಾಮರಗಿಂಡಿಯೊಳಗ |
ದೊಡಸಿರಲು ಬಂದಳು ಸಿತಾಬ್ಜಕೆ ಲಕ್ಷ್ಮಿಯಂದದಲಿ ||
ಎಡಬಲದೊಳಿಹ ಕಂಚುಕಿಗಳು |
ಗ್ಗಡದ ಹಾಯುವಘಾಲಿನಲಿ ಮುಂ |
ಗುಡಿಯ ಸಖಿಯರ ಗಡಣದಲಿ ನಡೆತಂದಳಿಂದುಮುಖಿ ||
ಕುಡಿತೆಗಂಗಳ ಸಿರಿಮುಡಿಯ ಬಡ |
ನಡುವ ಸೆಳೆವತಿಜೆಡಗಿಲಿ ಪ್ರೊಂ |
ಗೊಡವೊಲೆಯ ವೈಯಾರದಡುಗೆಯ ನೇಱಿಯ ಸಡಗರದ ||
ತೊಡರ ಝಣಝಣರವದ ಮೆಲ್ಲಡಿ |
ಯಿಡುವ ಗಮನದ ಭರದಿ ಕಿಱುಜೆಮ |
ರಿಡುತ ಬಂದಳು ಸತಿಯರೊಡನೆ ವಿವಾಹಮಂಟಪಕೆ ||
ಅವನಿಪತಿ ನಿಜಕುವರಿಗೆಂದನು |
ವಿವಿಧರತ್ನದ ಮಕುಟವರ್ಧನ |
ಭುವನಪತಿಗಳನೇಕವಿರಲಾಸಿಂಹಪೀಠದಲಿ ||

ಯುವತಿ ನೋಡಿತ್ತರದೊಳಹ ನೃಪ |
ನಿವಹದಲಿ ನೀಹಾಯ್ಕು ಮನವಿ |
ದ್ದವನ ಕೊರಳಿಗೆನುತ್ತ ಕೊಟ್ಟನು ಪುಷ್ಪಮಾಲಿಕೆಯ || ೫೭

ಬಂದಳಾದಮಯಂತಿ ನೃಪಸಭೆ |
ಗಂದು ಹೊಕ್ಕಳು ಕೆಳದಿಯರು ಮುಂದ |
ದಿಂದ ತೋಱಿದರಲ್ಲಿ ಯಿವರಿವರೆಂದು ವಿವರಿಸುತ ||
ಮುಂದೆ ಬರೆ ಕೈಕಂಬಿಯರು ಬಲು |
ಸಂದಣಿಯ ಕೆಲಕೊತ್ತಿಸುತಲಿರ |
ಲಿಂದುಮುಖಿ ನೋಡಿದಳು ಲಜ್ಜಾಭರದೊಳವನಿಪರ || ೫೮

ಮಾಳವಾಧಿಪನೀತ ಮಗಧನೃ |
ಪಾಲನೀತನು ಮತ್ಸ್ಯಕುರುನೀ |
ಪಾಳನೀತನು ಕೋಸಲಾಸ್ಪಯನೀತ ಬರ್ಬರನು ||
ಚೋಳನೀತನು ಸಿಂಧುರಾಜನು |
ಶೀಲನೀತ ಕಳಿಂಗಕುಂತಳ |
ಪಾಲಕನ ನೋಡಿತ್ತಲಮರೇಶ್ವರನವ್ರೋಲಗವ || ೫೯

ಎನ್ನನೊಲಿದಿಹಳೆಂದು ಕೆಲಬರು |
ಎನ್ನ ನೋಡಿದಳೆಂದು ಕೆಲಬರು |
ಗನ್ನದಿಂದೀಕ್ಷಿಸುತಲಿರ್ದರು ಕೆಲರು ಹುಬ್ಬಿನಲಿ ||
ಸನ್ನೆಮಾಡಿದಳೆಂದು ಕೆಲಬರು |
ಬಿನ್ನಣದಿ ಮಿಗೆವ್ರೋರೆನೋಟದ |
ಕಣ್ಣಿನಿಂದೀಕ್ಷಿಸಿದಳೆಂದಾಡಿದರು ಕೆಲಕೆಲರು || ೬೦

ಬಾಯ ಬಿಂಕದ ನುಡಿಯ ನವಿಗಳ |
ರಾಯರಾಟಿದರಲ್ಲಿ ಕಮಲದ |
ಳಾಯತಾಂಬಕಿ ನಳನ ರೂಪಿನ ನಾಲ್ಪರಿರೆ ಕಂಡು ||
ಮಾಯವಿದು ತಾನಱಿಯೆನೆನರ ಸಿ |
ಜಾಯತನನೆಂದೆನುತ ಮುರಿದಾ |
ವಾಯುಗತಿಯಲಿ ಬಂದು ಹೊಕ್ಕಳು ತನ್ನ ಮಂದಿರವ || ೬೧

ಅರಸಕೇಳೈ ತನ್ನಬಾಂಧವ |
ಧರಣಿಪರ ಮಂತ್ರಿಗಳ ಮುನಿಮು |
ವಿಪ್ರರ ಸುಗಾಯಕಪಂಡಿತರ ಭೂಸುರರ ಯಾಚಕರ ||
ಹರುಷ ಮಿಗಿಲಾದರಿಸಿ ಕರಿರಥ |
ತುರಗವಸ್ತ್ರಾಭರಣದಿಂದುಪ |
ಚರಿಸಿ ಭೀಮನೃಪಾಲನವರವರುಗಳ ಬೀಳ್ಕೊಟ್ಟ || ೩೨
ಅಳಿಯನನು ಮನ್ನಿಸುತ ಮಗಳಿಗೆ |
ಹೊಳವ ಮಣಿಭೂಷಣದ ಪೆಟ್ಟಿಗೆ |
ಗಳನು ಗಜರಥತುರಗಪದಾತಿಗಳ ಲಲನೆಯರ ||
ಬಳುವಳಿಯನಿತ್ತವನಿಪತಿ ನಿಜ |
ಬಲಸಹಿತ ಮಾಡಿದನು ಪಯಣವ |
ನುಲಿವ ಮಂಗಳಪಾಠಕರ ಸಂದಣಿಯು ರಭಸದಲಿ || ೩೩
ವರಮುಹೂರ್ತದೊಳೇರಿದನು ಮಣಿ |
ಕಿರಣಮುನ್ನತರಥವ ನಳಭೂ |
ವರನು ನಿಜಸತಿಸಹಿತ ಪೊಕ್ಕನು ನಿಷಧಪಟ್ಟಣವ ||
ಮೊರೆವ ಶಂಖಮೃದಂಗಭೇರಿಗ |
ಳುಱುಬಿ ಧಂಧಣಿರೆನಲು ಮಿಗೆ ಮೋ |
ಹರಿಸಲಾನಿಸ್ಸಾಳತತಿ ಘನವಾದ್ಯ ಘೋಷಿಸಲು || ೩೪
ಬಂದು ಹೊಕ್ಕನು ಮಂದಿರವ ನೃಪ |
ವೃಂದ ನಲಿಯಲು ಸಕಲಜನಸಹ |
ತಂದು ಸಿಂಹಾಸನಕೆ ಬಂದನು ಸಚಿವರೊಗ್ಗಿನಲಿ ||
ಇಂದುಮುಖಿ ದಮಯಂತಿಯೊಡನಾ |
ನಂದದಲಿ ಸಾಮ್ರಾಜ್ಯವಾಳಿದ |
ನಂದು ವರನಗರಾಧಿಪತಿ ಚೆನ್ನಿಗನ ಕರುಣದಲಿ || ೩೫

ಇಂತು ಮೂಱನೆಯ ಸಂಧಿ.

## ॥ ನಾಲ್ಕನೆಯ ಸಂಧಿ ॥

ಸೂಚನೆ ॥ ಮುಱುಗೆ ಪುರಜನ ಜೂಜಿನಲಿ ಪು ।
ಷ್ಕರಗೆ ರಾಜ್ಯವ ಸೋತು ನಳಭೂ ।
ವರನು ನಿಜಸತಿಸಹಿತ ನಡೆತಂದನು ವನಾಂತರಕೆ ॥

ಕೇಳಿದೈ ರಾಜೇಂದ್ರ ಧರ್ಮನೃ ।
ಪಾಲ ನೈಷಧನತುಳಸಂಪದ ।
ದೇಳಿಗೆಯನೇನೆಂಬೆ ಸಪ್ತದ್ವೀಪನವನಿಪರ ॥
ಮೌಳಿಗಳು ನೃಪಸಂಘ್ರಿಕಮಲವ ।
ನೋಲಗಿಸುತಿಹುದವನ ಕೀರ್ತಿ ಛ ।
ಡಾಳಿಸಿತು ತ್ರೈಜಗವನವನೀಪಾಲ ಕೇಳೆಂದ ॥ ೧

ಇಂತೆಸೆವ ಸಂಪತ್ತಿನಲಿ ಭೂ ।
ಕಾಂತ ನಳಚಕ್ರೇಶನಲಿ ದಮ ।
ಯಂತಿ ಪಡೆದಳು ಪುತ್ರಕನ ವರಪುತ್ರಿಯೊರ್ವಳನು ॥
ಸಂತಸದೊಳಿರಲಾವಿದರ್ಭಪು ।
ರಾಂತರದಿ ನೆರೆದಿರ್ದ ಜನಭೂ ।
ಕಾಂತರೊಡನೈತಂದು ಹೊಕ್ಕರು ತಮ್ಮ ನಗರಿಗಳ ॥ ೨

ಸುರಪನಾಗ ವಿದರ್ಭಪುರವನು ।
ತೆರಳುತಮರಾವತಿಗೆ ದಿಕ್ಪಾ ।
ಲರುಸಹಿತ ನಲವಿಂದೆ ದಮಯಂತಿಯ ಚರಿತ್ರಯನು ॥
ಹರುಷ ಮಿಗೆ ಕೊಂಡಾಡುತೈತರು ।
ತಿರಲು ಮಾರ್ಗದಿ ಕಂಡರಾಕಲಿ ।
ಪುರುಷನನು ಕುಟಿಲಾತ್ಮಕನ ನಿಷ್ಠುರಹೃದಯನನು ॥ ೩

ಕುರುಳುಜುಂಜುರ ತಲೆಯ ತಗ್ಗಿನ ।
ಕೊರಳ ಕೆಂಗರಿಗಣ್ಣ ಮೋರೆಯ ।
ಪರಕುಗಡ್ಡದ ಕೆಂಚುಮೀಸೆಯ ಮಲಿನವಸನದಲಿ ॥

ನೆರೆದ ವೀರಕರಾಳಭಟರಿ |
ತ್ತೆರದೊಳುಕ್ಕಿನ ತೇರಿನಲಿ ಕಲಿ |
ಪುರುಷ ಕಾಣಿಸಿಕೊಂಡನಮರೇಶ್ವರನ ನಸುನಗುತ ||

ಆರು ನೀ ಜಂಭಾರಿಯೋ ಇವ |
ರಾರು ಯಮವರುಣಾದ್ಯರೋ ನಂ |
ಬಾರವೆತ್ತಲು ನಿನಗೆಯೆನಲಮರೇಂದ್ರ ನಸುನಗುತ ||
ತೋಱುಪಸ್ತದೊಳೆಂದ ನಳನಿಗೆ |
ನಾರಿ ದಮಯಂತಿಯನು ಮದುವೆಯ |
ಧಾರೆಯೆಱೆಯಿಸಿ ಬಂದೆವೆನೆ ಖತಿಗೊಂಡ ಕಲಿರಾಯ ||

ಅನಿಮಿಷರು ನೀವಧಿಕಬಲರಾ |
ವನಿತೆಯನು ಕೈಕೊಳ್ಳಲಾಱದೆ |
ಜನಪ ನಳನಿಂಗಿತ್ತು ಬಂದಿರಿ ಪರಮಹಾದೀನ ||
ಎನಗೆ ನೇಮಿಸಿ ಕಳುಹಿ ನಿಮ್ಮಯ |
ಮನದ ಬಯಕೆಯ ಸಲಿಸುವೆನು ಕೇ |
ಳೆನಲು ಸುರಪತಿ ನಸುನಗುತ ಕಲಿಪುರುಷಗಿಂತೆಂದ ||

ಹೀನನಾದೆ ಕಲಿಪುರುಷ ನಿನ |
ಗೇನು ಪೌರುಷವುಂಟೆ ನಮಗಿ |
ನ್ನಾನರೋರುಹಗಂಧಿಯಲಿ ಮನವಿಲ್ಲ ನಳನೃಪತಿ ||
ಈಸಮಸ್ತನೃಪಾಲರಲಿ ನ |
ಶ್ಲಾಘಣನು ಶೌರ್ಯೋನ್ನತನು ಕಮ |
ಲಾಸನನಿಗಳವಲ್ಲ ನಿನ್ನಲಿ ಹುಯ್ಯಲೇಸೆಂದ ||

ಎನಲು ಖತಿಗೊಂಡೆಂದ ಕೇಳಿ |
ಯನಿಮಿಷಾಧಿಪಯೆನ್ನನಡೆಯಿಯ |
ದಿನಪನಿದಿರಲಿ ತಮದ ಹಾವಳಿಯೇ ಮಹಾದೇವ ||
ಎನಗೆ ಸರಿಯಾರಿನ್ನು ತಪನಾ |
ವನಿತೆಯನು ಕುಹಕದಲಿ ನಳಭೂ |
ಪನನು ಕೆಡಿಸಿಯೆ ಕಾನನಕೆ ಕಳುಹುವೆನು ನೋಡೆಂದ ||

ಮಿಡುಕಿದರು ಕಡುಪಾಪಿಯಿವ ತಾ |
ಬಿಡನೆನುತ ಮನನೊಂದು ಸುರಪತಿ |
ತಡೆಯದೈದಿದನಮರಪುರಕವನೀಶ ಕೇಳೆಂದ || ೧೨

ಇಳೆಯುತ್ತನಸೀತಳಕೆ ತಿಳಕವು |
ತಿಳಕನೆಂದೆನು ತನ್ನ ಭಟರಿಗೆ |
ನಳನೃಪನ ಕಟ್ಟುವಡೆ ಸಾಧ್ಯವಿದೆನಗೆಯಾತನಲಿ ||
ಬಲಿದಿಹಳು ಜಯವಧು ಸುಶೀಲತೆ |
ನೆಲಸಿಹುದು ಮನಸಿನಲಿ ದುರ್ಗುಣ |
ತಿಳಿಯನರಸನೆನುತ್ತ ಪೊಕ್ಕನು ನಿಷಧಪಟ್ಟಣವ || ೧೩

ಮಲ್ಲಿಗೆಯ ಬನ ಸಂಪಿಗೆಯ ಬನ |
ಪಲ್ಲಕೇತಕಿಕುಸುಮಮಯ ಮೊಳೆ |
ಯೆಲ್ಲ ರುದ್ರಾಕ್ಷಿಗಳು ಸರಸೀರುಹದ ಕೊಳಗಳವು ||
ಬಿಲ್ಲಪತ್ರಗಳಿಕ್ಷುದ್ರಾಕ್ಷೆಗ |
ಳೆಲ್ಲ ಖರ್ಜೂರಾದಿ ವಸ್ತುಗ |
ಳಲ್ಲದಿಲ್ಲ ವೃಥಾನೆಲಸಿಲ್ಲ ನಳನ ರಾಜ್ಯದಲಿ || ೧೪

ಇಲ್ಲವೆನ್ನರು ಬೇಡಿದರೆ ಬಿತ |
ರಲ್ಲಿ ಪಾಪಿನ ಪಂಥಗಳ ನುಡಿ |
ಯುಲ್ಲಿಯನೃತವನಾಡರಲ್ಲಿಹ ಸತ್ಯನಿರ್ಮಳರು ||
ಎಲ್ಲರೊಳಗತಿಹಿತರು ಕ್ರೋಧಗ |
ಳಿಲ್ಲದಿಹ ಸದ್ಧರ್ಮಜೀವಿಗ |
ಳಿಲ್ಲಿ ಮೆರೆವರು ಸುಜನರಾನಳನೃಪನ ರಾಜ್ಯದಲಿ || ೧೫

ಪತಿಯೊಡನೆ ಮೋಹಿಸರು ಸತಿಯರು |
ಸುತರು ಪಿತೃಗಳ ನುಡಿಗಳನು ತಾ |
ವತಿಗಳೆಯರಾಚಾರ ವರ್ಣಾಶ್ರಮದ ಧರ್ಮದಲಿ ||
ಮತಿಯುತರು ಹರಿಭಕ್ತಿಭಾವ |
ವ್ರತನಿಯಮನೇಮದಲಿ ಜನಗ |
ಸ್ಮೃತಿಯೊಳಿಹಮೊಸ್ತಾವರು ನಿಷಧನೃಪನ ರಾಜ್ಯದಲಿ || ೧೬

ಅಲ್ಲಿ ತಿರುಗಿದ ಬೀದಿಬೀದಿಗ |
ಳಲ್ಲಿ ಪುರಜನವಡಿಯನಂತಿರ
ಲಲ್ಲಿ ಮಾಯಾರೂಪಿನಿಂದ ಪಿಶಾಚನಂದದಲಿ |
ಸಲ್ಲಲಿತತರವಿಷ್ಣುಭಕ್ತರಿ |
ಗೆಲ್ಲ ನಯವಿದರಾದ ಸುಜನರ |
ನೆಲ್ಲ ಕಾಣುತ ಬಂದನರಮನೆಗಾಗಿ ಕಲಿರಾಯ || ೧೮

ಮುರಿದು ನೋಡಿದನಲ್ಲಿ ತಂಗಿದ |
ಮರಗಳುನ್ನತವಿವಿಧವೃಕ್ಷದ |
ಪೊರೆಗೆಯಲಿ ಕಣ್ಗೆಸೆವ ನಗರೋದ್ಯಾನ ವೀಥಿಯಲಿ ||
ಉರುತರದ ಸೊಗಸೆಸೆವ ಪತ್ರದ |
ತರುವಿನಗ್ರದೊಳಿರ್ದ ಬಹುದಿನ |
ವರಸ ಕೇಳ್ ಕಲಿಪುರುಷನಿತ್ತಲು ರಾಜಧಾನಿಯಲಿ || ೧೯

ಕರಸಿದನು ನಳನೃಪತಿ ಮುನಿಪರು |
ವಿಪ್ರರನು ಭೂಸುರವರ್ಗವನು ಸ |
ತ್ಕರಿಸಿ ಜಪತಪಹೋಮಯಜ್ಞಾದಿಗಳನನುಕರಿಸಿ ||
ಸುರರ ಸಂತರ್ಪಣೆಯೊಳಿರುತಿಹ |
ನರಸನನುದಿನ ಸ್ವರ್ಣದಾನಾಂ |
ತರದ ಫಲವನವಧಿಯೆ ಬಂದುದು ಕಾಲಗತಿ ನೃಪಗೆ || ೨೦

ಬಂದು ದಿವಸದೊಳಾಗ ನೃಪನಿಗೆ |
ಬಂದುದಲ್ಲಾ ಚಮನ ಕಾಲದೊ |
ಳೊಂದು ಪಾದ್ಯಾಚಮನವಿಲ್ಲದೆ ಮುಗಿದು ನಿರ್ಗುಣಿಯು ||
ಇಂದು ನನಗಿದೆ ಸಮಯವೆಂದಾ |
ನಂದದಲಿ ಕಲಿಪುರುಷ ರಾಯನ |
ಸಂಧಿಸಿದ ವಿಧಿವಶದ ತಪ್ಪಿಸಲಾರ ಪವಣೆಂದ || ೨೧

ಕಪಟಭೂಸುರವೇಷದಲಿ ನಿ |
ಷ್ಕಪಟಿ ನಳಭೂಪನ ಕೆಡಿಸುವೆ |
ಯುಪಮೆಯನು ತಾ ನೆಗಳಿ ಬಂದನು ಪುಷ್ಕರನ ಬಳಿಗೆ ||

ನಿಪುಣನೆಂದನು ನಿನಗೆ ನಳಭೂ |
ಮಿಪನು ಸೋತನೆನೆ ಕೇಳಿ ಬಂದಿಹೆ |
ಜಯಯಶಕೆ ಹೆದಱದಿರು ನಿನಗಹುದಖಿಳಸಾಮ್ರಾಜ್ಯ || ೧೨

ಬಲ್ಲಿಯಾ ನೀನೆನ್ನ ಲೋಕಕೆ |
ಬಲ್ಲಿದನು ತಾ ಕಲಿಪುರುಷ ನಳ |
ನಲ್ಲಿ ದ್ಯೂತವನಾಡಿ ಗೆಲಿಸುವೆ ನಿನ್ನ ನೆತ್ತದಲಿ ||
ಬಲ್ಲೆನೆನದಿರು ಸಕಲರಾಜ್ಯದ |
ವಲ್ಲಭನ ಮಾಡುವೆನು ನಡೆ ಪುಸಿ |
ಯಲ್ಲ ನಿಷಧನ ಕಿತ್ತು ಬಿಸುಡುವೆ ನಂಬು ನೀನೆಂದ || ೧೩

ನಂಬಿದನು ಲೇಸಾಗಿ ಭಾಷೆಯ |
ನಿಂಬುಗೊಂಡನು ಹೃದಯ ಪುಷ್ಕರ |
ನೆಂಬಳಿಕ ಸಂತೋಷದಲಿ ಕಲಿಪುರುಷನೊಡಗೊಂಡು ||
ಅಂಬುಜಾಕ್ಷನ ಕಳೆಗೆ ತಾ ಪ್ರತಿ |
ಬಿಂಬನೆನಿಸುವ ನಳನ ಬಳಿಗತಿ |
ಸಂಭ್ರಮದೊಳೈತಂದರಿಬ್ಬರು ರಾಯ ನೋಲಗಕೆ || ೧೪

ಮಿಸುನಿ ರತುನದ ಹಲಗೆಗಳಲಿ ರಂ |
ಜಿಸುವ ಮಂಟಪದೊಳಗೆ ರಾಜ |
ಪ್ರಸರಸಹಿತವನೀಶನಿದ್ದನು ಸಿಂಹಪೀಠದಲಿ ||
ಶಶಿಮುಖಿಯರೆಡಬಲದಿ ಕೈವಾ |
ರಿಸುತ ಸಿತಚಾಮರವ ಚಿಮ್ಮಲು |
ನಸುನಗುತ ಕೈಮುಗಿದು ಪುಷ್ಕರನೆಂದನಾ ನಳಗೆ || ೧೫

ಅರಸ ಕೇಳೀ ವಿಪ್ರಸತಿಭಾ |
ಸುರಸುತೇಜದೊಳೆಸೆವ ನೆತ್ತವ |
ನೆರಡ ಕಾಣಿಕೆಗೊಟ್ಟ ನಮಗಿದಱಲ್ಲಿ ಮನವಾಯ್ತು ||
ಹರಸು ಹಾಸಂಗಿಗಳನಾಡುವೆ |
ವಿರಚೆ ಸೋತವನಾವನಾಗಲಿ |
ಧರೆಯನುಳಿದು ವನಾಂತರಕೆ ಕಳುಹುವುದು ಸತಿಸಹಿತ || ೧೬

ಭೂರಮಣ ಚಿಂತಿಸಿದ ಮನದಲಿ |
ನಾರಿಯಳನೊಡ್ಡುವೆನು ಸೋತಿಹ |
ಧಾರಿಣಿಯ ನೆರೆ ಗೆಲುವೆನೆನ್ನುತ ತನ್ನ ಮನದೊಳಗೆ || ೩೧

ಅರಸನಾಪ್ತಪುರೋಹಿತನು ಮನ |
ಹರುಷವಳಿದಯ್ತಂದನಂತಃಪುರವ |
ಹೊಕ್ಕನು ರಾಜವದನೆಯ ಸಭೆಗೆ ತಾ ಬಂದು ||
ತರುಣಿಯರ ಮೇಳದಲಿ ಶೋಭಿಸ |
ಪರಮರತ್ನದ ಪೀಠದಲಿ ತಾ |
ಹರುಷ ಮಿಗೆ ರಂಜಿಸುವ ಸತಿಯಳ ಕಂಡು ಕೈಮುಗಿದು || ೩೨

ತಾಯೆ ಬಿನ್ನಹವಿಂದು ನಿಮ್ಮಯ |
ರಾಯ ಸೋತನು ಜೂಜಿನಲಿ ನಿ |
ರ್ದಾಯದಲಿ ಪುಷ್ಕರನು ಗೆಲಿದನು ಸಕಲರಾಜ್ಯವನು ||
ನೋಯಲಾಗದು ಚಿತ್ತದಲಿ ಸಿರಿ |
ಬೀಯವಾದುದು ಕೇಳಯಿನ್ನಿದ |
ರಾಯತವ ನೀವ್ ಬಲ್ಲರೆಂದನು ವಿಪ್ರ ಕೈಮುಗಿದು || ೩೩

ಕಮಲವನದಲಿ ಮಂಜು ಸುರಿವಾ |
ಕ್ರಮದ ಬಗೆಯಲಿ ಸತಿಯಳಿಗೆ ಮುಖ |
ಕಮಲ ಬಾಡಿತು ನುಡಿಯ ಕೇಳುತ ಮನದ ಚಿಂತೆಯಲಿ ||
ಕಮಲನಾಭನ ಕರುಣಕವಚವು |
ನಮಗದಾರೇಗುವರು ಶಿವಶಿವ |
ಕುಮತಿ ಪುಷ್ಕರನೆಂತು ಮುನಿದನೆಯೆನುತ ಮರುಗಿದಳು || ೩೪

ವಿಮಲಮತಿ ನಳನೃಪಗೆ ರಾಹು |
ಭ್ರಮಣವಾಯಿತೆ ಎನುತ ಸತಿ ಭೂ |
ರಮಣನೆಡೆಗೈದಿದಳು ಕಂಡಳು ಕಾಂತನಿಂಗಿತವ ||
ತಮದ ರಾಹುಗ್ರಹವು ಸೋಂಕಿದ |
ದ್ಯುಮಣಿಯಂತಿರೆ ಕಂಡು ಧೈರ್ಯದಿ |
ಕಮಲಮುಖಿ ಕೈಮುಗಿದು ಬಿನ್ನೈಸಿದಳು ನಿಜಪತಿಗೆ || ೩೫

ಇಂತು ಜೂಜಲಿ ಸೋತು ತಿರಿಗಿ |
ನ್ನೆಂತು ರಾಜ್ಯದಿ ನಿಲುವಿರೆನೆ ಭೂ |
ಕಾಂತ ವನವಾಸಕ್ಕೆ ನಿಜಸತಿಸಹಿತಲನುವಾದ || ೪೦

ತಳಿತ ಮಣಿಭೂಷಣಗಳೆಲ್ಲವ |
ಕಳಚಿ ಬಿಸುಟನು ಗುರುವಿನಂಘ್ರಿಗೆ |
ನಳನಮೊಂಬಿ ಸಹಿತೆರಗಿ ಪೋಗಪಟ್ಟನು ನಿಜಾಯಾಸ ||
ಬಳಿಕಲೈದಿದರಖಿಳಪುರಜನ |
ಜಲದ ಕಣ್ಣಳ ಧಾರೆಯಲಿ ಗಾ |
ವಳಿ ಮಸಗಿ ಮಿಗೆ ಶೋಕಜಲ ತುಂಬಿದುದು ಪಟ್ಟಣವ || ೪೧

ಸಾಲು ಕಂಬನಿಗಳಲಿ ನನೆದರು |
ಪ್ರೋಳಿಗದ ಪರಿಜನರು ಮಂತ್ರಿಗ |
ಳೋಲಗದ ಸಾಮಂತಸಚಿವರು ಮಲ್ಲಗಾಯಕರು ||
ಬಾಲೆಯರು ಬಾಲಕರು ಪುರಜನ |
ಜಾಲವೆಲ್ಲವು ಶೋಕದಲಿ ಕ್ಷಿತಿ |
ಪಾಲನರಸಿಯ ಕಂಡು ಮರುಗಿತು ಮಂದಿ ಗೋಳಿಡುತ || ೪೨

ಮನದಿ ಮುನ್ನವೆ ತಿಳಿದು ನೃಪಸತಿ |
ತನಯರನು ರಥದೊಳಗೆ ತಂದೆಯ |
ಮನೆಗೆ ಕಳುಹಿದಳಾಸ್ತ್ರೀರೊಡನೆ ವಿದರ್ಭಪಟ್ಟಣಕೆ ||
ಜನನ ಕೇಳಿತ್ತಲು ಮಹಾರೋ |
ದನದಿ ಪಟ್ಟಣವೆಲ್ಲ ಮರುಗಲು |
ವನಿತೆ ಪತಿಯೊಡನೈದಿದಳು ನಿಜಸತಿಯ ನೇಮದಲಿ || ೪೩

ವಿನಸೊಂಬಿನು ಜೆಯು ಅಶೋಕದ |
ವಾಸಿಸಿಯ ದಮಯಂತಿ ಸತ್ಯ |
ಜ್ಞಾನಿಯೆನಲಾ ಸತಿಯರಿಗೆ ಗುರು ಪತಿವ್ರತಾಗುಣದ |
ಮಾನದಲಿ ಪತಿಯಂಘ್ರಿಕಮಲ |
ಧ್ಯಾನದಲಿ ಮನಸಂದು ಸತಿ ಘನ |
ಕಾನನಕೆ ಗಮಿಸಿದಳು ವರಪುರವರಸನಾಜ್ಞೆಯಲಿ || ೪೪

ಇಂತು ನಾಲ್ಕನೆಯ ಸಂಧಿ.

## ॥ ಐದನೆಯ ಸಂಧಿ ॥

ಸೂಚನೆ ॥ ಅಡವಿಯೊಳು ಪತಿ ಕಳೆದುಬಿಟ್ಟ ಫಣಿ |
ಯೊಡಲಿಗಿಳಿಯುವ ಮುಂದೆ ಕಱಿಗಳ |
ಪಡೆಗೆಱಗಿ ದಮಯಂತಿ ಹೊಕ್ಕಳು ಚೈದ್ಯನಗರಿಯನು ॥

ಕೇಳು ಕುಂತೀತನಯ ನಳನೃಪ |
ಬೀಳುಕೊಂಡನು ಪುರವನಲ್ಲಿಂ |
ಮೇಲೆ ನಡೆದರು ಪಯಣಗತಿಯಲಿ ಹಲವು ಯೋಜನವ ॥
ಹೇಳಲೇನಾನನ್ತರ ವಿಧಿಯನು |
ತಾಳ್ಗೆಗಳೊಣಗಿದುವು ಸತಿಯಳ |
ಕಾಲೊಡೆದು ಬಸಿವರುಣಜಲದಲಿ ಬಟ್ಟೆ ಕೆಸಱಾಯ್ತು ॥ ೧

ಎಳೆಯ ಬಾಳೆಯ ಸುಳಿಯನನಲ |
ಜ್ವಲನ ಹೊಯ್ಯಲಿ ತಾಱಿಸಿದವೊಲು |
ಬಳಲಿದಬಲೆಯ ಕಂಡು ನೃಪ ಮಱುಗಿದನು ಮನದೊಳಗೆ ॥
ಲಲಿತಹೇಮದ ತೂಗುಮಂಚದ |
ಹೊಳೆವ ಹಂಸೆಯ ಹಾಸಿನಲಿ ತಾ |
ಮಲಗುತಿಹ ಸತಿಗೀವಿಧಿಯೆ ಹಾಯೆನುತ ಬಿಸುಸುಯ್ದ ॥ ೨

ಮಱುಗಲಿನ್ನೇಕರಸ ಬಿಡು ವಿಧಿ |
ಬರೆದ ಬರೆಹವ ತಪ್ಪಿಸಲು ಹರಿ |
ಹರವಿರಿಂಚಾದಿಗಳಿಗಳವೇ ನಮ್ಮ ಪಾಡೇನು ॥
ಹರೆವುದಾಕ್ಷಣ ತುಂಬುವುದು ಗೋ |
ಚರಿಸುವುದು ಸಿರಿ ನಿತ್ಯವೇನಿದ |
ನಱಿಯದವನೇ ನೋಯಲೇಕೆಂದಳು ಸರೋಜಮುಖಿ ॥ ೩

ನುಡಿಯ ಕೇಳುತ ಮನದಿ ಮಿಡುಕುತ |
ಪೊಡವಿಪನು ಸತಿಸಹಿತ ಘನತರ |
ದಡವಿಯಲಿ ಬರುತಿರೆ ಜಗನ್ಮೋಹನದ ಪಕ್ಷಿಗಳು ||
ಪೊಡವಿಗಿಳಿಯಲು ಕಂಡಪೇಕ್ಷಿಸಿ |
ಹಿಡಿವೆನೆಂದುಜವಣಿಸಿ ನೃಪ ಪ |
ಟ್ಟಡವ ಬೀಸಿದಡದನು ಕೊಂಡೊಯ್ದುವು ನಭಸ್ಸ್ಥಳಕೆ || ೪

ಮೂಗಿನಲಿ ಬೆರಳಿಟ್ಟು ಮುಕುಟವ |
ತೂಗಿದನು ನಸುನಗುತ ನಿಂದಿರ |
ಲಾಗ ಸೂಚಿಸಿದುವು ನಿರಂತರ ರಾಜ್ಯಭೋಗವನು ||
ಜೋಗದಿಂದಪಹರಿಸಿಕೊಂಡವ |
ಗೀಗ ನಾವಾಳು ತಿಳಿಯೆಂದು ಸ |
ರಾಗದಿಂದಲಿ ಮಾಯವಾದುವು ಪಕ್ಷಿಯುಗಳಗಳು || ೫

ಧರಣಿಪತಿ ಕೇಳ್ ನಿಷಧಪತಿ ಕಲಿ |
ಪುರುಷವಾಯುವ ಬಲ್ಲನೇ ಮನ |
ಮರುಗಿ ನಿರ್ವಾಣದಲಿ ನಿಂದಿರಲಾಗ ಸತಿ ಕಂಡು ||
ಹರಹರಾಯೆನುತಾಗ ಸೀರೆಯ |
ಸೆರಗ ಹರಿದಿತ್ತಳು ನೃಪಾಲಗೆ |
ಸಿರವ ನಸುಬಾಗಿದನು ನಾಚಿಕೆಯಾಗಲಿಂತೆಂದ || ೬

ಧರೆಯ ನೃಪರಿಗೆ ನಿಷಧಪುರಪತಿ |
ಯರಮನೆಯವೋಲಗದ ಸಮುಖವು |
ದೊರಕಲದು ಕಾರುಣ್ಯವೆಂಬೀಯರಸುತನ ನಮಗೆ ||
ಹರೆಯವಲ್ಲ ಸಮಸ್ತರಾಜ್ಯವ |
ಸಿರಿಗೆ ಬಾಹಿರನಾಗಿ ಸತಿಯುಳ |
ಸೆರಗನುಡುವಂತಾಯ್ತು ಹರಹರಯೆನುತ ಬಿಸುಸುಯ್ದ || ೭

ಧರೆಯ ಸಂಪದದಷ್ಟಭೋಗವ |
ಪರಿಹರಿಸಿ ನಿಜಪುತ್ರಮಿತ್ರರ |
ತೊರೆದು ನಂಬಿದ ಸತಿಯ ಘೋರಾರಣ್ಯಮಧ್ಯದಲಿ ||

ಹಿರಿಮುಖಳೆನಿಸಿ ನೋಯಿಸಿದೆ ಕೇ |
ಳ್ತರುಣಿಯೆನ್ನವೊಲುಂಟೆ ಪಾಪಿಗ |
ಳಳಿಯೆ ನೀ ಪೋಗಿನ್ನು ತಂದೆಯ ಮನೆಗೆ ಸತಿಯೆಂದ || ೮
ಇನಿಯನಾಡಿದ ನುಡಿಗೆಯಂಗನೆ |
ಕನಲಿ ನುಡಿದಳು ಶೋಕದಲಿ ನೀ |
ನಿನಿತು ಮುನಿದಾಡುವರೆ ನಾಕಿನ್ನಾರು ಗತಿಯೆನಗೆ ||
ಅನುದಿನವು ನಾ ನಿಮ್ಮ ಪದಯುಗ |
ವನಜವನು ಭಜಿಸುವುದ ತೊಱೆದಿಂ |
ತನುವ ಸೈರಿಸಲಾಱೆ ನೀಂ ಕೇಳೆಂದಳಿಂದುಮುಖಿ || ೯
ನೆಳಲು ತನುವಿನ ಬಳಿಯೊಳಲ್ಲದೆ |
ಚಲಿಸುವುದೆ ತಾ ಬೇಱೆ ಗತಿಯೇ |
ಪಲವು ಮಾತಿನ್ನೇಂ ನೀನೇ ಗತಿಯು ನನಗಿಂದು ||
ಪಳುವವೇ ಸಾಮ್ರಾಜ್ಯ ನಿನ್ನಡಿ |
ನೆಳಲಿನಲ್ಲಿರೆ ನೀನುಮಿಲ್ಲದ |
ನಿಳಯವೇ ನನಗಡವಿಯೆಂದೆಱಗಿದಳು ಪದಯುಗಕೆ || ೧೦
ಎನುತ ಸುರಿದಳು ಕಣ್ಣಿನಲಿ ಕಂ |
ಬನಿಯ ಮಿಡಿದಳು ಬೆರಳಿನಲಿ ಮು |
ನ್ನಿನಲಿ ಮಾಡಿದ ಕರ್ಮಫಲವಿದಕೇನ ಮಾಡುವುದು |
ಎನಗೆ ಚಿಂತಿಸಲೇಕೆ ನೀನಿಂ |
ದಿನಲಿ ನಿರ್ಮಳಚಿತ್ತದಲಿ ಕಾ |
ನನವ ಚರಿಸುವೆ ನಿನ್ನೊಡನೆ ತಾನೆಂದಳಿಂದುಮುಖಿ || ೧೧
ಶೋಕವೇಕೆಲೆ ತರುಣಿ ಬಾರೆಂ |
ದಾಕಮಲಲೋಚನೆಯ ತೋಳಿನೊ |
ಳಾಕೆ ಬಿಗಿಯಪ್ಪಿದನು ಸೆಱಗಿನೊಳೊಱಸಿ ಕಂಬನಿಯ ||
ಜೋಕೆಯಲಿ ಕುಳ್ಳಿರಿಸಿ ತೊಡೆಯೊಳ |
ನೇಕಪ್ರೀತಿಯೊಳೆಂದ ನೀನವಿ |
ವೇಕಿಯೇ ಬಿಡು ಮನದ ದುಗುಡವನೆಂದನಾ ನೃಪತಿ || ೧೨

ನುಡಿಯ ಕೇಳುತ ಮನದಿ ಮಿಡುಕುತ |
ಪೊಡವಿಪನು ಸತಿಸಹಿತ ಘನತರ |
ದಡವಿಯಲಿ ಬರುತಿರೆ ಜಗನ್ಮೋಹನದ ಪಕ್ಷಿಗಳು ||
ಪೊಡವಿಗಿಳಿಯಲು ಕಂಡಪೇಕ್ಷಿಸಿ |
ಪಿಡಿವೆನೆಂದುಱವಣಿಸಿ ನೃಪ ಪ |
ಟ್ಟಡವ ಬೀಸಿದಡದನು ಕೊಂಡೊಯ್ದುವು ನಭಸ್ಥಳಕೆ || ೪

ಮೂಗಿನಲಿ ಬೆರಳಿಟ್ಟು ಮುಕುಟವ |
ತೂಗಿದನು ನಸುನಗುತ ನಿಂದಿರ |
ಲಾಗ ಸೂಚಿಸಿದುವು ನಿರಂತರ ರಾಜ್ಯಭೋಗವನು ||
ಬೇಗದಿಂದಪಹರಿಸಿಕೊಂಡವ |
ಗೀಗ ನಾವಾಳು ತಿಳಿಯೆಂದು ಸ |
ರಾಗದಿಂದಲಿ ಪಾಯವಾದುವು ಪಕ್ಷಿಯುಗಳಗಳು || ೫

ಧರಣಿಪತಿ ಕೇಳ್ ನಿಷಧಪತಿ ಕಲಿ |
ಪುರುಷನಾಯುವ ಬಲ್ಲನೇ ಮನ |
ಮುಱುಗಿ ನಿರ್ವಾಣದಲಿ ನಿಂದಿರಲಾಗ ಸತಿ ಕಂಡು ||
ಪರಹರಾಯೆನುತಾಗ ನೀರೆಯು |
ನೆಱಗ ಹಱಿದಿತ್ತಳು ನೃಪಾಲಗೆ |
ನಿರವ ನಸುಬಾಗಿದನು ನಾಚಿಕೆಯಾಗಲಿಂತೆಂದ || ೬

ಧರೆಯ ನೃಪರಿಗೆ ನಿಷಧಪುರಪತಿ |
ಯುರಮನೆಯವೋಲಗದ ಸಮುಚಿತವು |
ದೊರಕಲದು ಕಾರುಣ್ಯವೆಂಬೀಯರಸುತನ ನಮಗೆ ||
ಪರೆಮವಲ್ಲ ಸಮಸ್ತರಾಜ್ಯವ |
ಸಿರಿಗೆ ಬಾಹಿರನಾಗಿ ಸತಿಯುಳ |
ನೆಱಗನುಡುವಂತಾಯ್ತು ಹರಹರಯೆನುತ ಬಿಸುಸುಯ್ದ || ೭

ಧರೆಯ ಸಂಪದದಷ್ಟಭೋಗವ |
ಪರಿಹರಿಸಿ ನಿಜಪುತ್ರಮಿತ್ರರ |
ತೊಱೆದು ನಂಬಿದ ಸತಿಯ ಘೋರಾರಣ್ಯಮಧ್ಯದಲಿ ||

ಹಿರಿಮಬಳಲಿಸಿ ನೋಯಿಸಿದೆ ಕೇ |
ಳ್ತರುಣಿಯೆನ್ನವೊಲುಂಟೆ ಪಾಪಿಗ |
ಳಱಿಯೆ ನೀ ಪೋಗಿನ್ನು ತಂದೆಯ ಮನೆಗೆ ನಡೆಯೆಂದ || ೮

ಇನಿಯನಾಡಿದ ನುಡಿಗೆಯಂಗನೆ |
ಕನಲಿ ನುಡಿದಳು ಶೋಕದಲಿ ನೀ |
ನಿನಿತು ಮುನಿದಾಡುವರೆ ಸಾಕಿನ್ನಾರು ಗತಿಯೆನಗೆ ||
ಅನುದಿನವು ನಾ ನಿಮ್ಮ ಪದಯುಗ |
ವನಜವನು ಭಜಿಸುವುದ ತೊಱೆದಿಂ |
ತನುವ ಸೈರಿಸಲಾಱೆ ನೀ ಕೇಳೆಂದಳಿಂದುಮುಖಿ || ೯

ನೆಳಲು ತನುವಿನ ಬಳಿಯೊಳಲ್ಲದೆ |
ಚಲಿಸುವುದೆ ತಾ ಬೇಱೆ ಗತಿಯೇ |
ಹಲವು ಮಾತಿನ್ನೇಕೆ ನೀನೇ ಗತಿಯು ನನಗೆಂದು ||
ಹಳುವವೇ ಸಾಮ್ರಾಜ್ಯ ನಿನ್ನಡಿ |
ನೆಳಲಿನಲ್ಲಿರೆ ನೀನುಯಿಲ್ಲದ |
ನಿಳಯವೇ ನನಗಡವಿಯೆಂದೆಱಗಿದಳು ಪದಯುಗಕೆ || ೧೦

ಎನುತ ಸುರಿದಳು ಕಣ್ಣಿನಲಿ ಕಂ |
ಬನಿಯ ಮಿಡಿದಳು ಬೆರಳಿನಲಿ ಮು |
ನ್ನಿನಲಿ ಮಾಡಿದ ಕರ್ಮಫಲವಿದಕೇನ ಮಾಡುವುದು ||
ಎನಗೆ ಚಿಂತಿಸಬೇಕೆ ನೀನಿಂ |
ದಿನಲಿ ನಿರ್ಮಳಚಿತ್ತದಲಿ ಕಾ |
ನನವ ಚರಿಸುವೆ ನಿನ್ನೊಡನೆ ತಾನೆಂದಳಿಂದುಮುಖಿ || ೧೧

ಶೋಕವೇಕೆಲೆ ತರುಣಿ ಬಾರೆಂ |
ದಾಕಮಲಲೋಚನೆಯ ತೋಳನು |
ಳಾಕಿ ಬಿಗಿಯಪ್ಪಿದನು ನೆಱಗಿನೊಳೊಱಸಿ ಕಂಬನಿಯ ||
ಜೋಕೆಯಲಿ ಕುಳ್ಳಿರಿಸಿ ತೊಡೆಯೊಳ |
ನೇಕಪ್ರೀತಿಯೊಳೆಂದ ನೀನಿವಿ |
ವೇಕಿಯೇ ಬಿಡು ಮನದ ದುಗುಡವನೆಂದನಾನೃಪತಿ | ೧೨

ಎಂದು ಸತಿಯೊಳ ಸಂತವಿಟ್ಟರ |
ವಿಂದನಾಭಧ್ಯಾನದಲಿ ಬರೆ |
ಮುಂದೆ ಘೋರಾರಣ್ಯವೆಸೆದುದು ಘನಭಯಂಕರದಿ ||
ಸಂದ ಮೃಗಖಗವಲ್ಲಿ ನೆಱೆದಿರೆ |
ಬಂದು ಹೊಕ್ಕರು ಕಾನನವನರ |
ವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ || ೧೩
ಲೋಕಕಧಿಪತಿ ನಳನ ರಾಣಿಗೆ |
ಶೋಕ ಪರ್ಬಿದ ತೆಱದಿ ಕತ್ತಲೆ |
ಲೋಕವನು ಮುಸುಕಿದುದು ಧರಣಿಯು ಮುಚ್ಚಿದಂದದಲಿ ||
ಭೀಕರಧ್ವನಿಗಳಿಗೆ ಹೆದಱಿದ |
ಳಾಕಮಲಲೋಚನೆಯು ಕಂಡು ವಿ |
ವೇಕನಿಧಿ ಸಂತೈಸಿ ಬಿಗಿಯಪ್ಪಿದನು ತೂಪಿರಿದು || ೧೪
ತರುಣಿಯಂಜದಿರಂಜದಿರು ವಿಧಿ |
ಬರೆದ ಬರೆಹವಿದೆನುತ ವೃಕ್ಷದ |
ತಱಗೆಲೆಯ ಹಾಸಿನಲಿ ಮಲಗಿಸಿ ಸತಿಯನೀಕ್ಷಿಸುತ ||
ವರರತುನಮಂಚದಲಿ ಪವಡಿಸಿ |
ಪರಮಸುಖವಿಹ ಸತಿಗೆ ವಿಧಿಯಿದು |
ಪರಹರಾಯೆನುತರಸ ಕಂಬನಿದುಂಬಿದನು ಮಱುಗಿ || ೧೫
ಎಲ್ಲರೋಪಾದಿಯ ಪತಿವ್ರತೆ |
ಯಲ್ಲವೀದಮಯಂತಿ ಬಿಡುವವ |
ಳಲ್ಲ ತನ್ನನು ತರುಣಿ ಕಾಣದ ಕಡೆಗೆ ತೆರಳಿದರೆ ||
ಅಲ್ಲಿ ತಂದೆಯ ಮನೆಗೆ ಪೋಗುವ |
ಳಲ್ಲಿ ತಾನಿರೆ ಬಿಡಳೆನುತ ಮನ |
ದಲ್ಲಿ ಯೋಚಿಸಿ ನಿಶ್ಚೈಸಿದ ತನ್ನ ನಿಜಸತಿಯ || ೧೬
ಮಱೆದು ಮಲಗಿದಳವಳ ಮಗ್ಗುಲ |
ನೆಱಗ ಮೆಲ್ಲನೆ ಜಾಱಿಸುತಲಾ |
ಗರಸ ವೆಸನವ ಕೊಂಡು ಮಲಗಿದ ಸತಿಯನೀಕ್ಷಿಸುತ ||

ಮಱುಗಿದನು ಮನದೊಳಗೆ ಹರಿ ಶ್ರೀ |
ಹರಿ ಜಗನ್ನಾಥಡವಿಯಲಿಯೆ |
ಜ್ಜಱಿಸದೇ ತಾನೆಂತು ಪೋಗುವನೆನುತ ಬಿಸುಸುಯ್ದ || ೧೭

ಮಡದಿಯುಗಲಿವನಲ್ಲಿ ಪತ್ರಂ |
ಟಡಿಯ ದಾಂಟುವ ಮರಳಿ ನಿಜಸತಿ |
ಯೆಡೆಗೆ ತಿರುಗುವ ಚಂದ್ರಬಿಂಬಾನನೆಯನೀಕ್ಷಿಸುವ ||
ಅಡಸಿದತಿದುಃಖದಲಿ ಮೆಲ್ಲಡಿ |
ಯಿಡುವ ಸತಿಯನು ನೋಡಿ ಮನದ |
ಗ್ಗಡದ ಶೋಕದಿ ನಡೆದ ನಳನೃಪನೊಂದು ಯೋಜನವ || ೧೮

ಮಱುಗುವುದು ಮನವೊಮ್ಮೆ ಕಂಗಳು |
ಮರಳಿ ನೋಡುವುವೊಮ್ಮೆ ಸತಿಯಳ |
ಯಿರವ ಕಾಣದೆ ನಳವಳಿಕೆ ಬಿಡದಾದುದಾಹೃದಯ ||
ಕರಗಿತರಸನ ಧೈರ್ಯ ಚಿತ್ತದಿ |
ಮುರಿದುದಗ್ಗದ ಮಹಿಮೆ ಶೋಕದ |
ಹೊಱೆಗೆಯಲಿ ಕಾತರಿಸಿ ನಡೆದನು ನೃಪತಿ ಕೇಳೆಂದ || ೧೯

ಕರುಣದೋಱದೆ ನೃಪತಿ ಸತಿಯಳ |
ತೊಱೆದು ಬಿಸುಟನು ವನದೊಳಗೆ ಹುಲಿ |
ಕರಡಿ ಮೃಗದುಪಟಳವ ತಾನಿನ್ನೆಂತು ಸೈರಿಸಳೊ ||
ಮೊರೆಯ ಲಾಲಿಸಿ ನೋಳ್ಪನೆಂದುರು |
ತರದ ಪ್ರೇಮದಿ ಬಂದು ಸತಿಗೆ |
ಜ್ಜಱಿಸುವಂದದಿ ತರಣಿ ತಲೆದೋಱಿದನು ಪೂರ್ವದಲಿ || ೨೦

ನಳಿನಮುಖಿ ಮೈಮುರಿದು ನಿದ್ರೆಯ |
ತಿಳಿದು ಮೆಲ್ಲನೆ ನೋಡಿದಳು ಯೆಡ |
ಬಲವನೀಕ್ಷಿಸಿ ಪತಿಯ ಕಾಣದೆ ಬಲಿದ ಮೂರ್ಛೆಯಲಿ ||
ಮಲಗಿದಳು ಮೈಮಱೆದು ನಿಮಿಷಕೆ |
ತಿಳಿದು ಕಾಣದೆ ಕಾತುರದಿ ಹಂ |
ಬಲಿಸಿ ಹಲುಬಿದಳಲ್ಲಿ ಗಿರಿತರುಸಿಕರಮಧ್ಯದಲಿ || ೨೧

ಹಾ ರಮಣ ನಳನೃಪತಿ ಹಾ ರಣ |
ಧೀರ ಸದ್ಗುಣಹಾರ ರಿಪುಸಂ |
ಹಾರ ನಿತ್ಯೋದಾರ ನಿರ್ಮಳ ಸತ್ಯಸಂಚಾರ ||
ಘೋರಕಾನನದೊಳಗೆ ನಂಬಿದ |
ನಾರಿಯಸು ಬಿಸುಡುವರೆ ತನಗಿ |
ನ್ನಾರು ಗತಿ ಮೊಗದೋಱೆನುತ ಹಲುಬಿದಳು ದಮಯಂತಿ || ೨೨

ಪೊಡವಿಗಿಳಿವೆನೊ ಹಾಯ್ದು ಪಾವಕ
ನೊಡಲ ಹೊಗುವೆನೊ ಕಾಳಕೂಟವ |
ಮಡುವಿನೊಳು ಮುಳುಗುವೆನೊ ಹಾಸಱೆಯೊಳಗೆ ಬೀಳುವೆನೊ ||
ಅಡಸಿದಾಪತ್ತಿನಲಿ ಗರಳವ |
ಕುಡಿವೆನೋ ತಾನೆನುತ ಸತಿ ಬಾ |
ಯ್ಬಿಡುತ ಕಾನನದೊಳಗೆ ತಿರುಗಿದಳಬಲೆ ಶೋಕದಲಿ || ೨೩

ಕಾಣಿರೇಯರಸಂಚೆಗಳ ನೀವ್ |
ಕಾಣಿರೇ ನಿಜಪತಿಯ ಗಿಳಿಗಳ |
ಕಾಣಿರೇ ಮೃಗಪಕ್ಷಿಗಳ ನಳಚಕ್ರವರ್ತಿಯನು ||
ಕಾಣಿರೇ ತರುಲತೆಗಳಿನಿಯನ |
ಕಾಣಿರೇ ನೀವೆಂದು ಶೋಕದೊ |
ಳೇಣಲೋಚನೆ ಹಲುಬಿದಳು ಹಲವಂಗದಲಿ ಪತಿಯ || ೨೪

ಮುಡಿ ಚದುರಿ ಹುಡಿಯೊಳಗೆ ಹೊರಳುತ |
ಲೊಡಲ ನೀಡಾಡಿದಳು ಧರೆಯೊಳ |
ಗಡವಿಪಾಲಾಗೆಂದು ಪಡೆದಳೊ ತನ್ನ ನಿಜಜನನಿ ||
ಮಡದಿಯರು ತನ್ನಂತೆ ಲೋಕದೊ |
ಳೊಡಲ ತೆತ್ತವರುಂಟೆ ಶೋಕದಿ |
ಪೊಡವಿಪತಿ ಮುಖದೋಱೆನುತ ಹಂಬಲಿಸಿದಳು ಪತಿಯ || ೨೫

ಮಾನವಾಧಿಪ ಕೇಳು ಬನದಲಿ |
ಮಾನಿನಿಗೆ ಮತ್ತೊಂದು ಕಂಟಕ |
ಹಾನಿ ಬಂದುದನೇನನೆಂಬೆನು ಪತಿಗೆ ಬಾಯ್ಬಿಡುತ ||

ಕಾನನದ ಬಳಿವಿಡಿದು ಬರೆ ಸು |
ಮ್ಮಾನದಲಿ ತಱಗೆಲೆಯ ಪಕ್ಕೆಯ |
ಮೌನದಲಿಯುರಗೇಂದ್ರನಿದ್ದನು ಬಲಿದ ನಿದ್ರೆಯಲಿ || ೨೬

ತರಳೆ ಕಾಣದೆ ಬರುತ ಮೆಟ್ಟಿದ |
ಳುರಗಪತಿಯನು ಕೋಪದಲಿ ಮಿಗೆ |
ಸುರಿವ ಗರಳದಿ ರೌದ್ರಮಯರೂಪಿನಲಿ ಬಾಲಕಿಯ ||
ತಱುಬಿ ಹಿಡಿದುದು ತವಕದಲಿ ಹಿಮ |
ಕರನ ನುಂಗುವ ರಾಹುವೆಂದೆನೊ |
ಳರಸ ಕೇಳಂಗನೆಯು ವಿಧಿಯನು ಹೇಳಲೇನೆಂದ || ೨೭

ಹಾ ರಮಣ ನಳನೃಪತಿ ತನ್ನನ |
ದಾರಿಗೊಪ್ಪಿಸಿ ಕಳೆದೆ ಪರಿಪರಿ |
ಕ್ರೂರಸರ್ಪನ ಬಾಯ್ಗೆ ತುತ್ತಾದೆನೆ ಜಗನ್ನಾಥ ||
ಆರಿಗೊರಲುವೆನಿನ್ನು ಪ್ರಾಣವ |
ನಾರು ಕಾವವರಕಟ ಬಿಡಿಸೈ |
ವಾರಿಜಾಕ್ಷ ಮುಕುಂದ ಸಲಹೆಂದೊರಲಿದಳು ತರಳೆ || ೨೮

ಶೈಲಶಿಖರದೊಳಿರ್ದು ಕೇಳಿದ |
ಬಾಲಕಿಯ ಶೋಕವನು ಬಿಲ್ಲಿನ |
ಕೋಲುಗಾಱನು ಕರದ ಬಿಲ್ಲಿನ ಶಬರನೈತಂದು ||
ಆಲತಾಂಗಿಯ ಪಿಡಿದು ನುಂಗುವ |
ಕಾಲಭುಜಗನ ಕಂಡು ನಿಜಕರ |
ವಾಳದಲಿ ಖಂಡಿಸಿದನಹಿಯನು ಬಿಡಿಸಿದನು ಸತಿಯ || ೨೯

ಹಾಯೆನುತ ಸುರರುಲಿಯೆ ಹಾವಿನ |
ಬಾಯೊಳಗೆ ಸಿಲುಕಿರ್ದ ಕಮಲದ |
ಳಾಯತಾಕ್ಷಿಯ ಬಿಡಿಸಿದನು ಸಂತೈಸಿದನು ಸತಿಯ ||
ರಾಯ ಕೇಳೈ ರಾಹುವಿನ ಕಟ |
ವಾಯ ಚಂದ್ರನ ಸೆಳೆವವೋಲರಿ |
ದಾಯಿತಬಲೆಗೆ ಮೂರ್ಛೆ ತಿಳಿದುದು ಶಬರಮಂತ್ರದಲಿ || ೩೦

ಬಂದು ಕೆಂದಾವರೆಯ ಕೊಳದಲಿ |
ಮಿಂದು ನಿಂದಿರೆ ಶಬರನೆಂದನು |
ಯಿಂದುಮುಖಿ ನೀನೆನಗೆ ಸತಿಯಾಗೆನಲು ಖತಿಗೊಂಡು ||
ಇಂದೆನಗೆಯಸುವಿತ್ತು ಸಲಹಿದ |
ತಂದೆಯಲ್ಲವೆ ನೀನು ಕೇಳು ಪು |
ಳಿಂದ ಮುಳಿದರೆ ಶಪಿಸುವೆನು ಹೋಗೆಂದಳಿಂದುಮುಖಿ || ೨೧

ತರುಣಿ ಕೋಪಿಸಿ ನುಡಿಯೆ ಭಯದಲಿ |
ಸಿರವ ಬಾಗಿ ಪುಳಿಂದಸತ್ತಲು |
ಮರಳಿದನು ದಮಯಂತಿ ಮನದಲಿ ಪತಿಗೆ ಹಂಬಲಿಸಿ ||
ಮಱುಗುವಳು ಬನದೊಳಗೆ ಭೂಪನ |
ನಱಸಿ ಕಾಣದೆ ಬಯಲಸಪ್ಪುವ |
ಉರವಣಿಪ ಕಣ್ಣೀರಿನಲಿ ನಡೆತಂದಳಿಂದುಮುಖಿ || ೨೨

ಅರಸ ಕೇಳಾಶ್ಚರ್ಯವನು ಸತಿ |
ಬರುತಿರಲು ಕಾನನದಿ ನೆರೆದಿಪ |
ಮರುಳುಬಳಗವು ಭೂತವೇತಾಳಗಳು ತೊಲಗಿದುವು ||
ಶರಭ ಮೊಲ ಕಾಡಾನೆ ಸಿಂಹಗ |
ಳಿರದೆ ಜಾಱಿದುವಲ್ಲಿ ಸತಿಯಳ |
ಪರಮಪಾತಿವ್ರತ್ಯ ಮಹಿಮೆಯನರಸಕೇಳೆಂದ || ೨೩

ಮುಂದೆ ಕಂಡಳು ಸೊಳೆವ ತಾಪಸ |
ವೃಂದವನು ಕಣ್ಣೀರ ಸುರಿಸುತ |
ಬಂದ ವನಿತೆಯ ಕೇಳಿದರು ಮುನಿವರರು ಕರುಣದಲಿ ||
ಇಂದುಮುಖಿ ನೀನಾರದಲ್ಲಿಗೆ |
ಬಂದ ಪದನೇನೆನಲು ಶೋಕದಿ |
ನೊಂದು ನುಡಿದಳು ಮುನಿಗಳಿಗೆ ಕೈಮುಗಿದು ವಿನಯದಲಿ || ೨೪

ಏನನೆಂಬೆನು ತನ್ನ ಪುಣ್ಯದ |
ಹಾನಿಯನು ಚಿತ್ತವಿಸಿ ಕರುಣದಿ |
ಮಾನನಿಧಿಗಳು ಬಲ್ಲಿರೇ ನಳಚಕ್ರವರ್ತಿಯನು ||

ಆನರೇಂದ್ರನ ಮಡದಿ ತಾ ಮು |
ನ್ನೇನ ನೋಂತೆನೊ ಪತಿಯಗಲಿ ಘನ |
ಕಾನನಕೆ ಗುರಿಯಾದೆನೆಂದಳು ತರುಣಿ ಬಿಸುಸುಯ್ದು || ೨೫
ಭೂತಳವ ನಳನೃಪತಿ ದ್ಯೂತದಿ |
ಸೋತು ಪುಷ್ಕರಗಿತ್ತು ಸತ್ಯದ |
ನೀತಿ ತಪ್ಪದೆ ಬಂದು ಬನದಲಿ ತನ್ನನಗಲಿದನು ||
ಘಾತುಗೊಂದಿದೆ ಪತಿಯ ಕಾಣದೆ |
ಭೀತಿಯಲಿ ನಿಮ್ಮಡಿಯ ಕಂಡೆನು |
ಭೂತದಯೆ ನಿಮಗುಂಟಲಾ ಸಲಹೆಂದಳಿಂದುಮುಖಿ || ೨೬
ನನೆದುದಂತಃಕರಣ ಕೇಳುತ |
ಮುನಿಗಳೆಂದರು ತಾಯೆ ಶೋಕದಿ |
ಕನಲಿ ಕಂಗೆಡಬೇಡ ನಿಜಪತಿ ರಾಜ್ಯ ಸಿರಿ ಸಹಿತ ||
ನಿನಗೆ ಬಂದಪರಿನ್ನು ಯೋಗದ |
ಮನದಲರಿದೆವು ನಾವು ಅಂಜದಿ |
ರೆನುತ ಪೇಳಿಯದೃಶ್ಯರಾದರು ಮುನಿಗಳೊಗ್ಗಿನಲಿ || ೨೭
ಆತರುಣಿ ಬೆರಗಾಗಿ ಕನಸಿನ |
ರೀತಿಯಾಯ್ತು ಕಟಕಟ ನಾನಿ |
ವ್ರಾತವೆತ್ತಲು ಸರಿದುದೋ ವಿಸ್ಮಯವಲಾಯೆನುತ ||
ಆತಳೋದರಿ ಪತಿಯ ಕಾಣದೆ |
ಕಾತುರದಿ ಬರುತಿರಲು ಕಂಡರು |
ನೂತನದ ಬೇಹಾರಿಗಳು ತೊಳಲುವ ನಿತಂಬಿನಿಯ || ೨೮
ಆರಿವಳು ವನಲಕ್ಷ್ಮಿಯೋ ಸುರ |
ನಾರಿಯೋ ಮಾರಾಂಗನೆಯೊ ಮದ |
ನಾರಿಸತಿಯೋ ಸರಸ್ವತಿಯೊ ಮೋಹನಸುರನಾಸಿನಿಯೊ ||
ಆರ ವನಿತೆಯೊ ಮಾಯರೂಪಿನ |
ಭೂರಿಭೂತವೊ ತಿಳಿಯಲರಿದಿವ |
ಳಾರೆನುತ ಭಯಗೊಂಡುನೋಡಿದರಲ್ಲಿ ಬಣಜಿಗರು || ೨೯

ನೋಡಿದಳು ದಮಯಂತಿ ಭೀತಿಯ |
ಲೋಡುತಿಹ ಬೀದಿಕೆಯ ವೈಶ್ಯರ |
ಪೇಡಿತನವನು ಕಂಡು ನಸುನಗುತಲ್ಲಿಗೈತಂದು ||
ಓಡಲೇತಕೆ ನಿಮಗೆಯುಪಪತಿ |
ಮಾಡುವಳು ತಾನಲ್ಲ ಜಗಕತಿ |
ರೂಢಿಸಿದ ನಳನೃಪನ ಸತಿ ತಾನೆಂದಳಂದುಮುದಿ || ೪೦

ವೀರಸೇನನ ತನಯ ನಳನೃಪ |
ಧಾರಿಣಿಯನಗಲಿದನು ಕಾರ್ಯದ |
ಕಾರಣದಿ ನಡೆತಂದನಡವಿಗೆ ತಪ್ಪನಗಲಿದನು ||
ದಾರಿತಪ್ಪಿದೆನಿಲ್ಲಿ ನಿಮ್ಮನು |
ಸೇರಿದೆನು ಪರದೇಶಿ ತನಗಾಂ |
ದಾರ ತೋಱಿರೆ ನೀವೆನುತ ತುಂಬಿದಳು ಕಂಬನಿಯ || ೪೧

ತಾಯೆ ನಿಮ್ಮ ಪದಾಬ್ಜ ದರ್ಶನ |
ದಾಯಿತೆಮಗಿಂದಿನಲಿ ಧನ್ಯರು |
ಈಯಮನೆಗೆ ತಂದುದೇ ವಿಧಿ ನಿಮ್ಮನೆನುತೆಱಗಿ |
ನೋಯದಿರಿ ಯಿದೆ ಚೈದ್ಯಪುರವೆಂ |
ದಾಯುವತಿಯೊಡಗೊಂಡು ಬರುತಿರೆ |
ತೋಯಜಾಪ್ತನು ಪಶ್ಚಿಮಾಂಬುಧಿಗಿಳಿದನೊಲವಿನಲಿ || ೪೨

ಹಗಲು ಸವೆದುದು ಪೊಂಬಿಸಲು ನೆರೆ |
ತೆಗೆದುದತಿವೇಗದಲಿ ಕತ್ತಲೆ |
ಬಿಗಿದುದವನೀತಳವ ಹೆಚ್ಚಿಗೆ ಮುಚ್ಚಿದಂದದಲಿ ||
ಸುಗುಣೆ ದಮಯಂತಿಯಳ ನೋಡಲು |
ನಗಸಿ ಬಂದನೆಮಿಷರಪೂರ್ವಲಾ |
ರೆಗಳು ಮೂಡಿದವಂಬರದಿ ಪ್ರಜ್ವಲಿಸ ಕಾಂತಿಯಲಿ || ೪೩

ಅವನಿಪತಿ ಕೇಳ್ ವೈಶ್ಯಕುಲಸಂ |
ಭವರು ಹಾದ್ಯಿದರಲ್ಲಿಗೊಡಾ |
ರವನು ಬಿಟ್ಟರು ಹಾಳಯದ ಮಲಗಿದರು ರಾತ್ರಿಯಲಿ ||

ಅವಧಿ ಬಂದುದನೇನನೆಂಬೆನು |
ಕವಿದು ಕಾಡಾನೆಗಳು ಮುತ್ತಿಗೆ |
ತವಕದಿಂ ನೀರಡಿಸಿ ಬಂದುವು ಗಿರಿಗಳಂದದಲಿ || ೪೪
ಮುರಿದು ತರುಗಳನಿಸುತ ಮೆಳೆಗಳ |
ನೊಣಸಿಮೆಟ್ಟುತ ಕೊಂಬಿನಲಿ ಬಲು |
ಮೊರಡಿಗಳ ಕಿತ್ತಿಡುತ ಸೊಂಡಿಲ ತೂಗಿ ಮದವೇರಿ ||
ಕರಿಗಳೈತರೆ ಕಂಡು ಭೀತಿಯೊ |
ಳರದೆ ಹೊಯ್ದರು ಕೆಲರು ಧೈರ್ಯದೊ |
ಳುಬ್ಬಿ ನಿಂದರು ಸಬಳದಲಿ ಪೊಕ್ಕಿರಿದು ಕಾದಿದರು || ೪೫
ಪೊಳೆದುವು ಮದಕರಿಗಳವರನು |
ಸೀಳಿದಾಯ್ತು ಕೆಲರ ಮುಸ್ತ್ರನೆ |
ಯಾಳು ಕವಿದುದು ಪೊಕ್ಕು ಕಾದಿದರಖಿಳಭುಜಬಲರು ||
ತಾಳಬಲ್ಲಿದರುಮವರು ಕರಿಗಳ |
ಧಾಳಿಗಿದಿರೇ ಮುರಿದು ಹಾಯ್ದರು |
ಹೇಳಲೇನದನದನ ತೆರನೋಡಿದರು ದೆಸೆದೆಸೆಗೆ || ೪೬
ತರಹರಿಸಿ ನಿಲಲರಿದು ಕರಿಗಳ |
ವುರುಬು ಘಾಸಿಟ್ಟಳಿಸಿ ಕೊಲುತಿರೆ |
ಹರಣವನು ಹೊರಗಾದಲೇಕೆಂದುಳಿದ ಸುಭಟರು ||
ತೆರಳಿತಲ್ಲಿಯದಲ್ಲಿ ಹಾಣೆ |
ಜ್ಯರು ಮುರಿದು ಬರೆ ಕಾಣುತಾಸ್ಯೆ |
ಶ್ವರಿಗಘನ ಚಿಂತಿಸಿದ ದಸನೇನೆಂದು ಮನದೊಳಗೆ || ೪೭
ಅಮ್ಮ ಕೇಳೀ ಮದಗಜಂಗಳು |
ನಮ್ಮ ಕೊಲುತಿದೆ ದದನ ಕಾಣೆನು |
ನಮ್ಮನೀ ನೆರೆ ನಂಬಿ ಬಂದಿರುವರಿಗೆ ಗತಿಯೇನ ||
ನಿಮ್ಮ ನಿಲ್ಲಿಗೆ ತಂದುದೇ ವಿಧಿ |
ಬೊಮ್ಮ ಬರೆದುದ ಮೀರುವವರಾ |
ರಮ್ಮ ಲೋಕದೊಳೆಂದು ಮರುಗಿದ ವೈಶ್ಯಕುಲತಿಲಕ || ೪೮

ಜನನವೇ ವರಭೀಮಸೇನನ |
ಮನೆಯೊಳಗೆ ನಳಚಕ್ರವರ್ತಿಯೆ |
ಇನಿಯನಗ್ಗದ ವೀರಸೇನನೆ ಮಾವನಾಗಿರಲು ||
ವನದೊಳಧಿಕರಿಗಳಿಗೆ ತಾ ನಿಜ |
ತನುವ ತೋರಬೇಕೆಂಬ ಕಾರಣ |
ತನಗಿರಲು ನೀವೇನ ಮಾಡುವಿರೆಂದಳಿಂದುಮುಖಿ || ೪೯

ಎನುತ ಕನ್ಯೆ ನೆಬಿಗಿದು ಮನದಲಿ |
ನೆನೆದಳಚ್ಯುತನಂಘ್ರಿಕಮಲವ |
ವನಜನಾಭ ಮುಕುಂದ ಸಲಹೆನೆ ಕರಿಗಳಾಕ್ಷಣಕೆ ||
ವನಕೆ ಮರಳುವವರನೆಲ್ಲರ |
ವನಿತೆ ಸಂತೈಸಿದಳು ನೃಪನ |
ನೆನೆವ ಭಕ್ತರಿಗುಂಟೆ ಭಯವೆನೆ ನೃಪತಿ ಕೇಳೆಂದ || ೫೦

ಕಳೆದರಂದಿನ ರಾತ್ರಿಯನು ರವಿ |
ಬೆಳಗಿದನು ಪೂರ್ವಾದ್ರಿಯಲಿ ಸಂ |
ದಣಿಸಿ ನಡೆದರು ಮುಂದೆ ಕಂಡರು ಚೇದಿಪಟ್ಟಣವ ||
ಹೊಳೆವ ಹೇಮದ ಸೌಧಗಳ ತ |
ತ್ತಳಿಸ ನೆಲೆಯುಪ್ಪರಿಗೆಗಳ ಕಂ |
ತೊಳಿದು ಮನಹರುಷದಲಿ ಹೊಕ್ಕರು ಸತಿಸಹಿತ ಪುರವ || ೫೧

ರಸದ ಲೇಪದ ಮಿಸುನಿಯೊಳು ಮಲಿ |
ವಸನದಲಿ ಹುದುಗಿರ್ದ ರತ್ನಪ್ರ |
ನಸಿದ ಮೇಘದೊಳೆಸೆವ ಚಂದ್ರನ ಬಿಂಬದಂದದಲಿ ||
ಶಶಿವದನೆ ಬರುತಿರಲು ಪುರಜನ |
ವೊಸೆದು ನೋಡಿದುದಲ್ಲಿಗಲ್ಲಿಗೆ |
ಬಿಸಜಮುಖಿಯಿವಳಾರೆನುತ ಬೆರಗಾಯ್ತು ಜನನಿಕರ || ೫೨

ನುಡಿಗೆ ಶುಕಪಿಕ ನಲಿಯೆ ಮಿಗೆ ನೆಳೆ |
ನಡು ಬಳುಕೆ ವೃತ್ತಸ್ತನಕೆ ಸೋಲ್ |
ಮುಡಿಯು ಭಾರಕೆ ಕೊರಳು ಕೊಂಕಲು ಮೆಲ್ಲಡಿಯನಿಡುತ ||

ಕುಡಿತೆಗಂಗಳ ನೋಟ ಕಾರ್ಮುಗಿ |
ಲೊಡೆದು ಮಿಂಚುವ ಮಿಂಚಿನಂದದಿ |
ಸಡಗರದಿ ಬರುತಿರ್ದಳಂಗನೆ ಪೊಳಲ ಬೀದಿಯಲಿ || ೫೩

ಹೇಮನುಪ್ಪರಿಗೆಯಲಿ ನೃಪಸತಿ |
ಕಾಮಿನಿಯರೋಲಗದೊಳೊಪ್ಪುತ |
ತಾಮರಸದಳನಯನೆ ದಮಯಂತಿಯನು ತಾ ಕಂಡು ||
ಈಮಹಾಸತಿಯಾವಳೋ ಸು |
ತ್ರಾಮನರಸಿಯೊ ಎನುತ ಕರಸಿದ |
ಡಾಮಹಿಳೆ ಬಂದಳು ನೃಪಾಲನ ಸತಿಯ ಸಮ್ಮುಖಕೆ || ೫೪

ತಾಯೆ ನೀನಾರಾವ ದೇಶದ |
ರಾಯನರಸಿಯಿದೇನು ನಿನಗೀ |
ಪ್ರಾಯದಲಿ ಕಳೆಗುಂದಿ ಮಾಸಿಪುದೇನು ಪೇಳೆನಲು ||
ಆಯುವತಿ ಕಣ್ಣೀರಿನಲಿ ಪೂ |
ರಾಯ ಶೋಕದಲೆಂದಳಾತರ |
ಳಾಯತಾಕ್ಷಿಗೆ ತನ್ನ ವೃತ್ತಾಂತವನು ಬಿಸುಸುಯ್ದು || ೫೫

ಕ್ಷಿತಿಯನೆಲ್ಲವ ಸೋತು ಜೂಜಲಿ |
ಪತಿ ಬನಕೆ ಬಂದೆನ್ನನಗಲಿದ |
ಮತಿವಿಕಳತನದಿಂದ ತಿರುಗುತ ಬಂದೆ ನಿಮ್ಮಡಿಗೆ ||
ಹಿತವರಾರನು ಕಾಣೆ ನೀವೇ |
ಗತಿಯೆನಗೆ ಪರದೇಶಿಯನು ಪರ |
ಹಿತವೆ ಪುಣ್ಯವು ರಕ್ಷಿಸೆಂದಳು ನಳನೃಪನ ರಾಣಿ || ೫೬

ನುಡಿಯ ಕೇಳುತ ಚೈದ್ಯಭೂಪನ |
ಮಡದಿ ನೂಪುರ ಘುಲಿರುಘುಲಿರೆನ |
ಲಡಿಯಿಡುತ ಬಂದಪ್ಪಿ ಸೆಱಗಿನೊಳೊಱಸಿ ಕಂಬನಿಯ ||
ಬಿಡು ವ್ಯಥೆಯ ವರಭೂಷಣಂಗಳ |
ತೊಡು ದುಕೂಲವನುಡು ಸುಮಾಲ್ಯವ |
ಮುಡಿಗೆ ನೇರಿಸು ತರುಣಿಯೆಂದಳು ಚೈದ್ಯನೃಪನರಸಿ || ೫೭

ದೇವಿ ನಿಮ್ಮುಪಚಾರವೇ ಸಂ |
ಭಾವನೆಯಲಾ ನಮಗೆ ಬೇಱೆ |
ಸ್ನಾನ ಭೂಷಣವೇಕೆ ದೇಸಿಗರಾವು ನಿಮ್ಮಡಿಯ ||
ಸೇವೆಯಲಿ ತಾನಿಹೆನು ಹೀನವ |
ನಾವು ಬಳಸುವರಲ್ಲ ತನ್ನನು |
ಕಾವ ಹದನನು ನೀವೆ ಬಲ್ಲಿರಿಯೆಂದಳಾಸತಿಗೆ || ೫೮

ಎನಲು ನಸುನಗುತೆಂದಳಾಮಾ |
ನಿನಿಗೆ ತಮ್ಮಿಂದಾಗದುಪಹತಿ |
ನಿನಗೆ ಹೇಳೆವು ಹೀನ ಕೆಲಸವ ಚಿಂತೆ ಬೇಡಿನ್ನು ||
ತನಗೆ ಮಗಳು ಸುನೀತಿಯಾಕೆಯ |
ಮನೆಯೊಳಿರು ಸೈರಂಧ್ರಿತನದಿಂ |
ದನವರತ ನೀನೆಂದು ನೇಮಿಸಿ ಕಳುಹಿದಳು ಮನೆಗೆ || ೫೯

ಚೇದಿಭೂಪನ ಮಡದಿ ತನ್ನ ಸ |
ಹೋದರಿಯ ಸುತೆಯೆಂದು ಬಲ್ಲಳೆ |
ಮೇದಿನಿಯೊಳವಳಾರ ಸತಿಯೆಂದಱಿಯಳಾಕೆಯನು ||
ಆದರಿಸಿ ಸಲಹಿದಳು ಮಗಳೋ |
ಪಾದಿಯಲಿ ದಮಯಂತಿಯನು ಮನ |
ಖೇದವಿಲ್ಲದೆ ಕರುಣದಿಂದಂಗನೆಯ ನೃಪನರಸಿ || ೬೦

ಮನದಡಗೆಯಡಗಿತು ಸುನೀತಿಯ |
ಮನೆಯೊಳಿದ್ದಳು ಖೇದವಿಲ್ಲದೆ |
ಯನುದಿನದೊಳಾಹಾರ ನಿದ್ರಾಂಗನೆಯ ತಾನುಳಿದು ||
ವನಜನಾಭನ ಕರುಣದಲಿ ಬಂ |
ದಿನಿಯನೆಂದಿಗೆ ಮುಖವ ತೋಱುವ |
ನೆನುತ ಚಿಂತಿಸುತಿರ್ದಳಾವರಪುರದ ಚೆನ್ನಿಗನ || ೬೧

ಐದನೆಯ ಸಂಧಿ ಮುಗಿದುದು.

## ॥ ಆಱನೆಯ ಸಂಧಿ. ॥

---

ಸೂಚನೆ ॥ ಇಂದುವದನೆಯನಗಲಿ ತಾ ಮನ |
ನೊಂದು ಕಾರ್ಕೋಟಕನ ದೆಸೆಯಲಿ |
ಬಂದು ಹೊಕ್ಕನು ನಳನೃಪತಿ ಋತುಪರ್ಣ ನಗರಿಯನು ॥

ಕೇಳು ಕುಂತೀತನಯ ನಿಷಧನೃ |
ಪಾಲನಿತ್ತಲು ಮುಱಿದು ಮಲಗಿದ |
ಬಾಲಕಿಯ ಬಿಟ್ಟಡವಿಯಲಿ ಪೋಜವಂಚನಾಪ್ರಮದ ॥
ಕಾಲವಾವನ ಬೀಳುಮಾಡದು |
ಶೂಲಪಾಣಿಯೆ ಬಲ್ಲ ನಳಭೂ |
ಪಾಲನ ವಿಧಿಯನೇನನೆಂಬೆನು ಬಂದನಡವಿಯಲಿ ॥ ೧

ವನಿತೆ ಮಲಗಿಹಳೋ ಅರಣ್ಯದಿ |
ನೆನೆವಳೋ ಪ್ರಿಯನನು ನಿದ್ರೆಯ |
ಕನಸ ಕಂಡೇಳುವಳೊ ಕಾಣದೆ ಹಲವ ಹಂಬಲಿಸಿ ॥
ಕನಲಿ ವಿಧಿಯನು ಬೈವಳೋ ಕಂ |
ಬನಿಯ ಸುರಿವಳೋ ಶೋಕದಲಿ ನಿಜ |
ತನುವ ಬಿಡುವಳೊ ಕಾಂತೆ ಯೆಂತಿಹಳೆನುತ ಬಿಸುಸುಯ್ದ ॥ ೨

ಸುತರ ಪರದೆಶೆಗಿತ್ತು ನಂಬಿದ |
ಸತಿಯ ತಂದಡವಿಯಲಿ ಮಲಗಿಸಿ |
ಮತಿವಿಕಳನಾದೆನು ಪುರಾಕೃತಪುಣ್ಯಫಲವೈಸೆ |
ಕ್ಷಿತಿಯೊಳಾರುಂಟೆನ್ನವೋಲ್ ನಿಜ |
ಸತಿಗೆ ತಪ್ಪಿದ ಬಾಹಿರನು ಯೆಂ |
ದತಿಶಯದ ಶೋಕದಲಿ ನಡೆದನು ಶಿವಶಿವಾಯೆನುತ ॥ ೩

ಲೋಕದೊಳಗಗ್ಗಳೆಯ ಮಹಿಪರ |
ನೇಕರವರೊಳಗಾರನೊಲ್ಲದೆ |
ನೂಕಿ ತನ್ನನೆಯೊಲಿದು ಕೈಕೊಂಡಳು ಸರೋಜಮುಖಿ ||
ಆಕೆಯಗಲಿದ ಪಾತಕನು ತಾ |
ನೇಕೆ ಧರೆಯೊಳು ಶಿವಶಿವಾಯೆಂ |
ದಾಕಮಲಲೋಚನೆಗೆ ಮರುಗುವನರಸ ಕೇಳೆಂದ || ೪

ಈಪರಿಯೊಳತಿಶೋಕದಿಂದ ಪ್ರ |
ಳಾಪಿಸುತ ನಳನೃಪತಿ ಹೆಚ್ಚಿದ |
ತಾಪದಲಿ ಕಡುನೊಂದು ಬಳಲುತ ತನ್ನ ಮನದೊಳಗೆ ||
ಶ್ರೀಪತಿಯು ನೆಲೆಗೊಳಿಸಿ ಹೃದಯದ |
ತಾಪದೊಳು ಬರುತಿರಲು ಮುಂದೆ ಸ |
ಮೀಪದಲಿ ಹುತವಹನ ಮಹಿಮೆಯು ಕಂಡನವನೀಶ || ೫

ಏನನೆಂಬೆನು ನೃಪತಿ ಕಿಚ್ಚಿ ಸ |
ಹಾನಿಯನು ಬನದೊಳಗೆ ಬೆರಸಿತು |
ಭಾನುಮಂಡಲವಡೆಗೆ ಮುಸುಕಿದ ಹೊಗೆಯು ಹೊರಳಿಯಲಿ ||
ಕಾನನವನೆಡೆಗೊಂಡ ದಳ್ಳುರಿ |
ಗಾನಲಾಪುದೆ ತರುನಿಕರ ವೈ |
ಮಾನಿಕರು ನಡನಡುಗೆ ಬೆಂದುದು ಸಕಲವನಭೂಮಿ || ೬

ಬಿದಿರ ಮೆಳೆ ಧಗಧಗಿಸೆ ಘನಹೆ |
ಬ್ಬಿದಿರು ಛಟಛಟರೆನಲುವುರಿಯೊಳು |
ಕದಳಿಗಳು ಶಿಮಿಶಿಮಿಸೆ ತರುಗಳನುರುಹಿ ಮೆಳೆಗಳನು ||
ಗದಗದಿಸೆ ಗುಹೆಗಳಲಿ ಮೃಗತತಿ |
ಬೆದರಿ ಹಾಯ್ದುವು ಪಕ್ಷಿಸಂಕುಲ |
ವುದುರಿದುವು ಗರಿಸಹಿತ ಬೆಂದುವು ವನದ ಮಧ್ಯದಲಿ || ೭

ತೆಗೆದು ಹಾಯ್ದುವು ಸಿಂಹಶಾರ್ದೂ |
ಲಗಳು ಕರಿಗಳ ಹಿಂಡು ನಾನಾ |
ಮೃಗಗಳ ಗಣಿತ ಬೆಂದು ಬಿದ್ದುವು ನಿಮಿಷಮಾತ್ರದಲಿ ||

ಕರುಣದಲಿ ನೃಪ ಭೀತಿಗೊಳ್ಳದೆ |
ಯುರಗಪತಿಯನು ತೆಗೆಯುತನಲನ |
ಪುರಿಯ ತಪ್ಪಿಸಿ ಕೊಳನ ತೀರಕೆ ತಂದುಪಚರಿಸೆ ||
ಕರವಿಡಿದು ಧರಣೀಶನ ಕಚ್ಚಿದ |
ಡುರವಣಿಸಿ ವಿಷವೇರೆ ನೃಪತಿಯು |
ಪರಮತೇಜದ ದೇಹ ಕೆಟ್ಟಿತು ವಿಕೃತರೂಪಾಗಿ || ೧೨

ದೊಡ್ಡಹೊಟ್ಟೆಯ ಕೂನುಬೆನ್ನಿನ |
ಅಡ್ಡಮೋರೆಯ ಗಂಟುಮೂಗಿನ |
ಮೊಣ್ಡುಕೈಕಾಲುಗಳ ಪುಗಾಣಿನ ರೋಮಮೀಸೆಗಳ ||
ಜಿಡ್ಡುದೇಹದ ಗೂಜ್ಜುಗೊರಲಿನ |
ಗಿಡ್ಡರೂಪಿನ ಹುಳುಕುಗಡ್ಡದ |
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ || ೧೩

ಮಾರನಾಕಾರದ ನೃಪಾಲಕ |
ಕ್ರೂರರೂಪಾದನು ಪುರಾಕೃತ |
ವಿಧಿಬಲಾರಳವೆಂದು ನುಡಿದನು ತನ್ನ ಮನದೊಳಗೆ ||
ನೀರಮಾಣಿಕವೆಂದು ಪಿಡಿದರೆ |
ಘೋರಕೆಂಡವಿದಾಯ್ತು ಶಿವಶಿವ |
ಕ್ರೂರಜಂತುಗಳೊಡನೆ ಸುಕತನ ಫಲಿಸಿತೆನಗೆಂದ || ೧೪

ಮುನ್ನ ಮಾಡಿದ ಕರ್ಮಫಲವಿದು |
ಬೆನ್ನ ಬಿಡುವುದೆವುರಗಪತಿ ಕೇ |
ಳಿನ್ನು ನೋಯಲದೇಕೆ ತಾನೇ ಪಾಪಿಯಾದೆನಲಾ ||
ಪನ್ನಗಾರಿಧ್ವಜನ ಕೃಪೆ ತನ |
ಗಿನ್ನು ತಪ್ಪಿದ ಬಳಿಕ ಲೋಕದೊ |
ಳಿನ್ನು ಸೈರಿಸಲಾರ ಪಶಸೆಂಬೆನುತ ಮರುಗಿದನು || ೧೫

ಏಕೆ ನೃಪತಿ ವೃಥಾ ಮನೋವ್ಯಥೆ |
ಕಾಕುಬಳಸಲು ಬೇಡ ನೀ ನವಿ |
ವೇಕಿಯೋ ನಾನಿನ್ನು ನಿನಗುಪಕಾರವಂಜದಿರು ||

ಲೋಕ ನಿನ್ನನು ಕಾಣದಂತಿರ |
ಬೇಕೆನುತಲೀಕ್ಷಿಸಿದೆ ಗರಳವ |
ನೇಕವುಪಕಾರಂಗಳಹವಿದರಿಂದ ನಿನಗೆಂದ || ೧೭

ಗರಳವಿದು ಸರ್ವಾಂಗದಲಿ ಸಂ |
ಚರಿಸುತಿಹ ಪರಿಯಂತ ರಿಪುಗಳ |
ಶರಜಲಾಗ್ನಿ ಭುಜಂಗರೋಗಾದಿಗಳ ಭಯವಿಲ್ಲ ||
ನಿರತವಿದು ವಜ್ರಾಂಗಿ ಜೋಡಿ |
ನ್ನರಸ ಚಿಂತಿಸಬೇಡ ಕಾರ್ಯದ |
ಹೊರೆಗೆ ತಾನಿದು ಬೇರೆ ಭಯ ಬೇಡಿನ್ನು ನಿನಗೆಂದ || ೧೮

ಜನಪ ಕೇಳ್ಳೈ ಧರೆಗೆ ಋತುಪ |
ರ್ಣನು ಮಹಾರಾಜೇಂದ್ರ ಗುಣ |
ನಿಧಿಯಿನಕುಲಾಂಬುಧಿಚಂದ್ರನಾತನ ಪುರ ನಯೋಧ್ಯೆಯು ||
ನಿನಗೆ ಬಹುದಕ್ಷರಹೃದಯವಾ |
ತನಲಿ ನೀನದಗಶ್ವಹೃದಯವ |
ನನುಗೊಳಿಸು ಸಾಕಿನ್ನು ಚಿಂತಿಸಬೇಡ ಹೋಗೆಂದ || ೧೯

ಕ್ಷಿತಿಪನನು ಸ್ರೋಳ್ಯೈಸು ಸಾರಥಿಯ |
ಹಿಡಿದು ಬಾಹುಕನೆಂಬ ನಾಮದಿ |
ನಡೆಸು ರಥವನು ಹೀನವೃತ್ತಿಯಿದಲ್ಲ ನಿನಗಿನ್ನು ||
ಬಿಡದೆ ಮುನ್ನಿನ ರೂಪು ಬೇಕಾ |
ದೊಡೆ ನೆನೆವುದಾಸಕ್ತಿಗಳ ಪ |
ಚ್ಚಡವನೀವುದು ಧರಿಸಲಡಗುವುದೀಕುರೂಪಿತನ || ೨೦

ನಿನ್ನ ಪವಣೇ ಪೂರ್ವದಲಿ ಫಿ |
ಕ್ವಾಣ್ಣನನು ಬೇಡಿದನು ಪಶುಪತಿ |
ಪನ್ನಗಾರಿಧ್ವಜನು ಕಾದನು ಪಶುಗಳಡವಿಯಲಿ ||
ಉನ್ನತೈಶ್ವರ್ಯಪ್ರದನು ಶತ |
ಮನ್ಯು ಬನದಲಿ ನವೆಯನೇ ಸಾ |
ಕಿನ್ನು ಮನನೋಯದಿರು ಚಿಂತ್ಯೈಸೆಂದನುರಗಪತಿ || ೨೧

ಪರಮಸತ್ಯವ್ರತದೊಳಾಪ್ರ |
ಷ್ಕರನ ಗೆಲಿದುನ್ನತದ ರಾಜ್ಯದ |
ಸಿರಿಸಹಿತ ಸಾಮ್ರಾಜ್ಯವಾಳುವೆ ನಿನ್ನ ಸತಿಸಹಿತ ||
ವರವನಿತ್ತೆನು ನಿನಗೆಯೆಂದುಪ |
ಚರಿಸಿ ಕಾರ್ಕೋಟಕನು ನಳನೃಪ |
ಗಜುಪುತಾಕ್ಷಣ ಮಾಯವಾದನು ರಾಯ ಕೇಳೆಂದ || ೧೧

ಬಲಿದ ಚಿಂತೆಯ ಮನದ ಮುಗುಡದ |
ನಳನೃಪತಿ ಕಾನನದಿ ಬರುತಿರೆ |
ಮಳೆದು ತೊಳಗದ ದುಷ್ಟಮೃಗಗಳ ಕಂಡು ನಸುನಗುತ ||
ಹಲವು ಗಿರಿಗುಹೆಗಹ್ವರಂಗಳ |
ಕಳೆದು ಮುಂದಣ ಜನಪದಂಗಳ |
ಬಳಿವಿಡಿದು ನಡೆತಂದನಲಸದೆ ಹಲವು ಯೋಜನವ || ೧೨

ಹರಿವ ನದಿಗಳ ವನತಟಾಕದ |
ವರಕುಸುಮಮಲ್ಲಿಗೆಯ ಬನಗಳ |
ಪುರದ ಪ್ರಾಂತ್ಯದೊಳೆಸೆವ ಕೆಂದಾವರೆಯ ಕೊಳಗಳನು ||
ಉರುತರದ ಮಂಟಪಗಳಿಂದೆಸೆ |
ಮೆರೆವ ರಾಜ್ಯವ ಕಳೆದು ಮುಂದಕೆ |
ಬರುತಯೋಧ್ಯಾಪುರದ ಕಂಡನು ನೃಪತಿ ಕೇಳೆಂದ || ೧೩

ಧಗಧಗಿಪ ಕೋಟಾವಳಿಯ ಹೊಗ |
ರೊಗುವ ಹೇಮದ ಕೊತ್ತಳಂಗಳ |
ಗಗನವನು ಚುಂಬಿಸುವ ತೆನೆಗಳ ಸಾಲುರತ್ನಗಳ ||
ಸೊಗಸುವಾಳ್ವೇರಿಗಳ ಸುತ್ತಿರು |
ವಗಳಘಾತವನಾರು ಬಲ್ಲರು |
ಬಿಗಿದ ವಜ್ರಕವಾಟವೆಸವಿರಲಷ್ಟದಿಕ್ಕಿನಲಿ || ೧೪

ಹೊಳೆವ ಮಿಸುನಿಯ ರತ್ನಸಿಂಹಯುವ |
ನೆಲೆನೆಲೆಯ ಸೌಧಾಗ್ರದಲಿ ಪ್ರ |
ಜ್ವಲಿಪ ಹೇಮದ ಕಲಶಗಳ ರವಿಚಂದ್ರಶಾಲೆಗಳ ||

ಲಲನೆಯರ ನಾನಾವಿನೋದದ |
ಹಲವು ಗೋಪುರಶಿಖರದಗಣಿತ |
ನೆಲೆಯು ವಣಿಸಲದಿದಯೋಧ್ಯಾಪುರವು ರಂಜಿಸಿತು || ೨೬
ಅರಸುಗಳು ಭೂಸುರರು ಮಿಗೆ ವೈ |
ಶ್ಯರು ಚತುರ್ಥರು ನಾಗರೀಕದ |
ಪುರಜನರು ಸಂದಣಿಸಿತಗಣಿತ ಕೇರಿಕೇರಿಯಲಿ ||
ಕರಿತುರಗರಥಪಾಯದಳ ಗೋ |
ಚರಿಸಿತಂಗಡಿ ಸದಸಿಧಾನದ |
ಮೆಱೆವಯೋಧ್ಯಾಪುರದ ಕಂಡನು ತೂಗಿದನು ಶಿರವ || ೨೭
ಬಂದು ಹೊಕ್ಕನು ಪುರವ ಮೆಱೆವತಿ |
ಚಂದವನು ನೆಱೆನೋಡಿ ಮನದೊಳ್ |
ಗಂದು ಕೊಂಡಾಡಿದನು ಋತುಪರ್ಣನ ಮಹಾಸಿರಿಯ |
ತಂದುದೇವಿಧಿ ತನ್ನಸಿರಿಗೆ |
ಮಂದಭಾಗ್ಯನು ತಾನೆನುತ ಮನ |
ನೊಂದು ನೆನೆದನು ವರಪುರಾಧಿಪ ಚೆನ್ನಕೇಶವನ || ೨೮

ಆಱನೆಯ ಸಂಧಿ ಮುಗಿದುದು.

* * *

## || ಏಳನೆಯ ಸಂಧಿ ||

ಸೂಚನೆ || ಮಗಳ ಕಾಣದೆ ಭೀಮನೃಪ ಮೂ |
ಜಗವ ಶೋಧಿಸಿ ವಿಪ್ರನಿಕರವ |
ನಗರದಲ್ಲಿರೆ ಕಂಡು ಕರೆಸಿದ ತನ್ನ ನಿಜಸುತೆಯ ||
ಕೇಳು ಧರ್ಮಜ ರತ್ನನಿರ್ಮಿತ |
ದಾಲಯದ ಸೊಂಪಿನಲಿ ಯೋಲಗ |
ಶಾಲೆಯಲಿ ಋತುಪರ್ಣನಿದ್ದನು ಸಿಂಹಪೀಠದಲಿ ||
ಸಾಲಮಕುಟದ ನೃಪರು ಭೂಸುರ |
ಜಾಲ ಮಂತ್ರಿಪುರೋಹಿತರು ಗುಣ |
ಶೀಲರುನ್ನತಸತಿಯರಿಂದೆಸೆದಿರ್ದುದಾಸ್ಥಾನ || ೧

ಇದು ಸಮಯ ತನಗೆಂದು ನಳನೃಪ |
ಮುದದಿ ವೇಷವ ಮಱಸಿ ಹರಿಯಂ |
ದದಲಿ ಬಂದನು ಸಭೆಗೆ ಕಂಡನು ನೃಪಗೆ ಕೈಮುಗಿದು ||
ಸದಮಲಾಸ್ಥಾನದಲಿ ರಿಪುನೃಪ |
ಕದನಗಲಿಗಳು ಜೀಯೆನಲು ನಯ |
ಹೃದಯದಲಿ ಬಿನ್ನೈಸಿದನು ಋತುಪರ್ಣಭೂಪತಿಗೆ || ೨

ಅವನಿಪತಿ ಕೇಳ್ನಿಮ್ಮ ಪದಕಮ |
ಲವನು ಭಜಿಸುವೆ ಜೀಯ ಚಿತ್ತದಿ |
ಸವಡಿಸುಡಿಯೆನಗಿಲ್ಲ ಬಾಹುಕನೆಂಬುದಭಿಧಾನ ||
ಭುವನದೊಳು ತಾನಶ್ವಕುಲಹೃದ |
ಯವನು ಬಲ್ಲೆನು ಶಾಕಪಾಕದಿ |
ಸವಿಗೊಳಿಪ ವರವಿದ್ಯೆ ತನಗುಂಟೆಂದನವ ನಗುತ || ೩

ಸೂಪಕಾರದೊಳಗ್ಗಳನು ಕಡು |
ರೂಪಿನವ ತಾನಲ್ಲ ಚಿತ್ತದಿ |
ಕಾಪುರುಷನೆನ್ನದಿರು ನೋಡಾ ತನ್ನ ಪೌರುಷವ ||
ಭೂಪ ಮುಂಗೈಗಂಕಣಕೆ ಕುಲ |
ದೀಪ ಕನ್ನಡಿಯೇಕೆ ತರಿಸು ಪ್ರ |
ತಾಪವಾಜಿಯನೆಂದು ಬಿನ್ನೈಸಿದನು ನಸುನಗುತ || ೪

ಪೊಡವಿಪತಿ ಋತುಪರ್ಣ ಬಾಹುಕ |
ನುಡಿದ ವಚನಕೆ ಮೆಚ್ಚಿ ಮನದು |
ಗ್ಗಡವ ತೇಜಿಯ ತರಿಸಿ ಕೊಡಲೇಱಿದನು ಬೀದಿಯಲಿ ||
ಮಡದ ಸನ್ನೆಗೆ ಕುಣಿದುರವೆಗಾ |
ಱಿಡುತ ಜೋಡಣೆಯಿಂದ ಹಯವಡಿ |
ಗಡಿಗೆ ಚಿಮ್ಮಿತು ವಾಯುವೇಗದೊಳರಸ ಕೇಳೆಂದ || ೫

ಕರದ ವಾಘೆಯ ಸಡಿಲ ಬಿಡೆ ನಿ |
ಬ್ಬರವ ಗಮನದೊಳೈದಿತವನಿಯೊ |
ಳುಱವಣಿಸಿ ಕೆಂದೂಳಿ ಮುಸುಕಿದುದಂಬರವ ಬಿಡದೆ ||

ಧರಣಿ ತಲ್ಲಣಿಸಿದುದು ಗಗನದಿ |
ಸುರರು ಕೊಂಡಾಡಿದರು ರಾವುತ |
ರರಸನಹುದೋ ಭಾಪು ಭಾಪೆಂದುದು ಸಮಸ್ತ ಜನ || ೬
    ಮುರುಹಿ ಹಿಡಿಯಲು ಮಡಿದ ಸನ್ನೆಗೆ |
ತಿರುಗಿತತಿವೇಗದಲಿ ಹಯಮ್ರೋ |
ಸರಿಸಿ ಕಿಱುಬೆಮರಿಡಲು ನಿಲಿಸುತ ವಾರುವವನಿಳಿದು ||
ಕರವ ಮುಗಿಯಲು ನೃಪತಿ ಮೆಚ್ಚುತ |
ತರಿಸಿಕೊಟ್ಟನು ಭೂಷಣಂಗಳ |
ಹಿರಿದು ಸಂಬಳವಿತ್ತು ನಿಲಿಸಿದನರಸ ಬಾಹುಕನ || ೭
    ಜನಪ ಕೇಳ್ ಬಾಹುಕನು ಜೀವಲಾ |
ಖ್ಯನಲಿ ಸಖ್ಯವ ಬೆಳಸಿಯಾತನ |
ನನುದಿನವು ಕೂಡಿರ್ದನೊಂದಾನೊಂದು ದಿನ ರಾತ್ರಿ ||
ವನಜಮುಖಿ ದಮಯಂತಿಯೊಳು ಚುಂ |
ಬನಸರಸಸಲ್ಲಾಪದಿಂದಿಪ |
ಕನಸ ಕಂಡೆಚ್ಚಱವೆ ಕಾಣದೆ ಸತಿಗೆ ಹಲುಬಿದನು || ೮
    ಹಾ ತರುಣಿ ನಳನಾಕ್ಷಿ ಸಯಸು |
ಪ್ರೀತಿಪೂರ್ವಕದಿಂದ ಕನಸಲಿ |
ಮಾತುದೋಱದೆ ಬಂದು ನನ್ನಲಿ ಕರುಣದಿಂ ನೀನು ||
ಧಾತುಗುಂದಿದೆನಕಟ ! ಅಸುರಾ |
ರಾತಿ ಬಲ್ಲನೆಸುತ್ತ ಮನದಲಿ |
ಕಾತರಿಸಿ ನಿಜಸತಿಗೆ ಹಲುಬಿದ ಮದನನೆಸುಗೆಯಲಿ || ೯
    ವಿಕಳವನು ಜೀವಲಾಖ್ಯ ಕೇಳಿದ |
ಪಕಪಕನೆ ನಗುತೆಂದನೆಲೆ ಬಾ |
ಹುಕನೆ ಹಲುಬುವುದೇನು ಕಂತೆಗೆ ತಕ್ಕ ಬೊಂತೆಯನು ||
ಅಕಟ ನೀಂ ಸತಿಚೆಲುವನೋ ಬಾ |
ಲಕಿ ನಿನಗೆ ತಕ್ಕವಳೊ ಲೋಕದಿ |
ಮಕರಕೇತನ ಮರುಳನೆಂದುಪಹಾಸ್ಯ ಮಾಡಿದನು || ೧೦

ಎಂದು ಹಾಸ್ಯವ ಮಾಡಿದವನೊಡ |
ನೆಂದನಾಬಾಹುಕನು ಪೂರ್ವದೊ |
ಳೆಂದು ಬ್ರಾಹ್ಮಣನೊಬ್ಬ ನಿಜಸತಿಯಗಲಿಯೆನ್ನೊಡನೆ ||
ನೊಂದು ನುಡಿದನು ವಿರಹದಲಿ ಯುಗ |
ನಿಂದು ಕನಸಲಿ ಕಂಡು ಭ್ರಾಂತಿಯೊ |
ಳೆಂದಡದು ತಪ್ಪೇನು ಸತಿಸುತರಿಲ್ಲ ತನಗೆಂದ || ೧೧

ಅರಸ ಕೇಳಾಪುರದೊಳೊಬ್ಬರಿ |
ಗಱಿಯದಂದದಿ ನೆಲಸಿರಲು ಭೂ |
ಸುರರ ಮತದಲಿ ಕೇಳ್ದು ಭೀಮನೃಪಾಲನೀಹದನ ||
ಧರೆಯನೆಲ್ಲವ ಜಾಡಿಸಲಿ ಪು |
ಷ್ಕರಗೆ ಸೋತು ನಿಸ್ಪೃಹನಡವಿಗೆ |
ತೆರಳಿದನು ಸತಿಸಹಿತನೆನೆ ಹೊರಳಿದನು ಶೋಕದಲಿ || ೧೨

ಹಾ ಮಗಳೆ ದಮಯಂತಿ ನೃಪನ |
ಭೂಮಿಪನ ಕೈವಿಡಿದು ಬಾಳುವ |
ನೇಮವನು ಬಿಸುಟಡವಿಗೆಯ್ದಿತೆ ಪಿತೃನಿಕರ್ಮಫಲ ||
ಭೀಮನೃಪನುದರದಲಿ ಜನಿಸಿ ವಿ |
ರಾಮವಾದುದೆ ನಿನ್ನ ಸಿರಿ ಸುಖ |
ತಾಮರಸವನು ಕಾಗೆ ತೋಱಿದಂದರಸ ಹಲುಬಿದನು || ೧೩

ಮಗಳೆ ಪೋಷದ ಸುತರನಾರಿಗೆ |
ತೆಗೆದು ಬಿಸುಟೆ ನಿರಾಶೆಯಲಿಯೀ |
ಬಗೆಗೆ ತಂದುದೆ ವಿಧಿಯು ನಿನ್ನನು ಪರಮಹಾದೇವ ||
ಹೊಗಲುಬಹುದೇ ಕಾನನದೊಳಿಹ |
ಮೃಗಗಳಿಂದೇನಾದೆಯೋ ಪತಿ |
ಯಗಲಿದನೊ ಭೇತಾಳ ಸೋಂಗಿತೊ ಎನುತ ಹಲುಬಿದನು || ೧೪

ಬಡವರುವರಪೋಷದಿಸಿ ಸುಜನನು |
ಪಡೆಯಲೊಲ್ಲದೆ ಬಂದು ನಿನಿನೀ |
ಪೊಡವಿಪತಿಯುದರದಲಿ ಸಂಜನಿಸುವರೆಯೊಳೆ ತಾಯೆ ||

ಗಿಡುಮರಗಳಾರಣ್ಯದಲಿ ತನು |
ಬಿಡದು ಸೈರಿಪುದೆಂತು ಮಗಳೇ |
ಸುಡು ತನುವನಿದನೆಂದು ಮಱುಗಿದಳವಳ ನಿಜಜನನಿ || ೧೫
ಸತಿಪತಿಗಳೀಪರಿಯು ಶೋಕೋ |
ನ್ನತಿಯು ಸೈರಿಸಲಾಱದಾವಾ |
ರುತನ ಸಖನೊಳು ಪೋಗುವೆವೆಂದುರವಣಿಸಿ ನಡೆತರಲು ||
ಕ್ಷಿತಿಪ ಕೇಳಿಂತವರು ಬರುತಿರೆ |
ಮತಿಯುತನೆ ಚಿಂತೆಯನು ಬಿಡು ಪತಿ |
ವ್ರತೆಗೆ ಹಾನಿಯೆ ಸುಖದೊಳಿಹಳೆಂದುದು ನಭೋವಚನ || ೧೬
ಎಂದ ವಾಕ್ಯವ ಕೇಳಿ ಭೂಸುರ |
ವೃಂದದಲಿ ಮುನಿಯೊರ್ವ ನುಡಿದನು |
ಸಂದ ಪರಮಾನಂದಜೋತಿರ್ಮಯನ ವಾಕ್ಯವಿದು ||
ಇಂದುಮುಖಿ ದಮಯಂತಿ ನಳನೃಪ |
ರೆಂದಿಗೂ ಸುಕ್ಷೇಮಿಗಳು ನೀ |
ವಿಂದು ಕಳುಹಿಸಿ ಚರರ ಶೋಧಿಸಲೆಂದನಾಮುನಿಪ || ೧೭
ಎನಲು ಮುನಿಪನ ವಚನದಲಿ ಯುರ |
ಮನೆಗೆ ಬಂದು ವಿಶಾಲಚಿಂತೆಯು |
ಮನದೊಳಿರೆಯಿನನಿಳಿದನಸ್ತಾಂಬುಧಿಗೆ ವಹಿಲದಲಿ ||
ಜನಪನಾರಾತ್ರಿಯಲಿ ನಿದ್ರಾಂ |
ಗನೆಯನುಳಿದಿರೆ ಪೂರ್ವಶೈಲದಿ |
ದಿನಪ ತಲೆದೋಱಿದನು ಹರೆದುದು ರಜನಿಯಾಕ್ಷಣಕೆ || ೧೮
ಅರಸ ಕರೆಸಿದನಾಪ್ತರನು ಭೂ |
ಸುರರಿಗೆಂದನು ನೀವು ಕರುಣದಿ |
ಧರೆಯೊಳೆಲ್ಲಿಹಳೆನ್ನ ಸುತೆ ದಮಯಂತಿ ನಳನೃಪರ ||
ಇರವ ಕಾಂಬುದು ಕಂಡು ಕರೆತಂ |
ದರಿಗೆ ಕೊಡುವೆನು ಧರೆಯೊಳರ್ಧವ |
ನಿರತವೆಂದುಪಚರಿಸಿ ಕಳುಹಿದ ಭೀಮನೃಪನವರ || ೧೯

ಹರಿದರರಸಾಳುಗಳು ಪಶ್ಚಿಮ |
ಶರಧಿ ದಕ್ಷಿಣಶರಧಿ ಪೂರ್ವದ |
ಶರಧಿಯುತ್ತರಕುರು ನರೇಂದ್ರರ ಸೀಮೆಪರಿಯಂತ ||
ಪುರಗಳಲಿ ವನವೀಥಿಯಲಿ ತ |
ದ್ಗಿರಿಗಳಲಿ ನಾನಾದಿಗಂತದೊ |
ಳಱಸಿ ಕಾಣದೆ ಮುಂದೆ ನಡೆದರು ಹಲವು ದಿವಸದಲಿ || ೨೦

ಪುರನಗರವೀಥಿಗಳ ಮಧ್ಯದಿ |
ನೆರೆದ ಸಭೆಯಲಿ ಮಾರ್ಗದಲಿ ಸಂ |
ಚರಿಸುವವರನು ಕಂಡು ಕೇಳುತ ಬಂದರಲ್ಲಲ್ಲಿ ||
ಇರವ ಕಾಣದೆ ಬಳಲಿ ಚಿಂತಿಸಿ |
ಮಱುಗುತವನೀಸುರರು ಭೇದಿಸು |
ತಿರಲು ಮೂವರು ಚೇಱಿ ಹೊಕ್ಕರು ಚೈದ್ಯನಗರಿಯನು || ೨೧

ಅಲ್ಲಿ ವಾರ್ತೆಯ ಕೇಳಿದರು ಭೂ |
ವಲ್ಲಭನ ಕ್ರತುಸಮಯವೆಂದವ |
ರೆಲ್ಲ ಗಮಿಸಲು ಕಂಡು ಮೂವರು ಕೂಡುತವರೊಡನೆ ||
ನಿಲ್ಲದೈದಿದರರಮನೆಗೆ ತಮ |
ಗಲ್ಲಿ ದಕ್ಷಿಣೆ ತೃಪ್ತಿಭೋಜನ |
ವಲ್ಲಿಮಿಗಿಲಹುದೆನುತ ಹೊಕ್ಕರು ಯಜ್ಞಮಂಟಪವ || ೨೨

ಜನಪನವನೀಸುರರ ಮಂತ್ರದೊ |
ಳನಿಲಸಖನಾರಾಧಿಸಲು ನೃಪ |
ತನುಜೆಯಾದ ಸುನೀತೆಯೊಳು ದಮಯಂತಿ ಭಾವಿಸುತ ||
ವನಿತೆಯಿರೆ ಕಂಡನು ಸುದೇವನು |
ಮನದೊಳನುಮಾನಿಸಿದನೀಮಾ |
ನಿನಿ ಮಹಾಸತಿಯೆನುತ ವಿಸ್ಮಯಗೊಂಡು ಮನದೊಳಗೆ || ೨೩

ಮುಗಿಲು ಮುಸುಕಿದ ಚಂದ್ರಬಿಂಬವೊ |
ಪಗಲೊಳೆಸೆವ ಸುದೀಪಕಾಂತಿಯೊ |
ಹೊಗೆಯೊಳೆಸಗಿದ ಚಿತ್ರಪ್ರತಿಮೆಯೊ ಹೇಳಲೇನವಳ ||

ಉಗಿದು ಬಿಸುಟ ವಿಭೂಷಣದ ಮೈ |
ಲಿಗೆಯ ಸೀರೆಯ ಮಲಿನತನು ಕಳೆ |
ದೆಗೆದು ಕೈಗಲ್ಲದಲಿ ನಿಂದಿರೆ ಕಂಡನಾಸತಿಯ || ೧೪

ಇದು ಪತಿವ್ರತಧರ್ಮವಹುದೀ |
ಸುವತಿ ತೊಱೆದಿಹಳೆಲ್ಲವನು ನೃಪ |
ವಧುವ ಕಾಣಿಸಿಕೊಂಬೆನೆಂದು ಸುದೇವ ನಡೆತಂದು ||
ಹದನಿದೇನೌ ತಾಯೆ ನಿಮ್ಮಯ |
ವದನಕಮಲವು ಬಾಡಿ ಕಡುಮಾ |
ಸಿದುದಿಗೆಯಲಿಹುದೇನು ಕಾರಣವೆನುತಲಿಂತೆಂದ || ೧೫

ಇಂದುವದನೆ ವಿದರ್ಭಪಟ್ಟಣ |
ದಿಂದ ಬಂದೆನು ತಾನು ಭೂಸುರ |
ವೃಂದ್ಯನೆನ್ನಭಿಧಾನ ಕೇಳು ಸುದೇವನೆಂಬುವುದು ||
ಇಂದು ನಿಮ್ಮನು ನೋಡ ಕಳುಹಿದ |
ತಂದೆ ಭೀಮನೃಪಾಲನಾತನ |
ನಂದನೆಗೆ ತಾ ಸಱನು ಚಿತ್ತೈಸೆನ್ನ ಬಿನ್ನಪವ || ೧೬

ಕ್ಷಿತಿಪ ಭೀಮನೃಪಾಲನಾತನ |
ಸತಿಸುತರು ಬಾಂಧವಸಹೋದರ |
ರತಿಶಯರು ನಿಮ್ಮಯ ಕುಮಾರರು ಕುಶಲರಿಂದಿಸಲಿ ||
ಕ್ಷಿತಿಯನಗಲುತ ನಳನೃಪತಿ ನಿಜ |
ಸತಿಸಹಿತ ವನಕೈದಿದುದ ಕೇ |
ಳುತಲಿ ನಿಮ್ಮವರೆಲ್ಲ ಶೋಕಾಬ್ಧಿಯಲಿ ಮುಳುಗಿಹರು || ೧೭

ಘೋರತರಶೋಕವನು ಸೈರಿಸ |
ಲಾಱದಾಸತಿಪತಿಗಳಿಬ್ಬರು |
ಸೋಱುತಿಹ ಕಂಬನಿಗಳಲಿ ಕರೆದೆಮ್ಮ ಕಳುಹಿದರು ||
ಧಾರಿಣಿಯೊಳಱಸುತ್ತ ಬಂದೆವು |
ವಾರಿಜಾನನೆ ನಿಮ್ಮ ಕಂಡೆವು |
ಸೇಱಿತೆಮ್ಮಯ ಪುಣ್ಯವೆಂದು ಸುದೇವ ಕೈಮುಗಿದ || ೧೮

ವನಿತೆ ಕೇಳುತ ಶೋಕಜಲದಲಿ |
ನನೆದು ಬುಧಕುಲತಿಲಕನನು ಬಾ |
ರೆನುತ ಮನ್ನಿಸಿ ತನ್ನವರಸತಿಗಡಿಗೆ ಬೆಸಗೊಳಲು ||
ವನಿತೆ ನೋಡಿದಳಾಸುದೇವನ |
ಜನನಿಗಱುಪಲು ಬಂದಳಾವಿ |
ಪ್ರನನು ನೀವಾರೆಸಲು ನುಡಿದನು ಬಂದ ಸಂಗತಿಯ || ೧೯
ಕೇಳು ತಾಯೆ ವಿದರ್ಭಪತಿಭೂ |
ಪಾಲನಾತ್ಮಜೆ ಪತಿಯೊಡನೆ ತ |
ನ್ನಾಲಯವನುಳಿದು ವನಕ್ಕೈದಿದಳೆಸಲು ನೃಪ ಕೇಳಿ ||
ತಾಳಲಾಱದೆ ನೋಡಿ ಕರತರ |
ಪೇಳಿ ಕಳುಪಲು ಬಂದೆನಿಲ್ಲಿಗೆ |
ಬಾಲೆ ದಮಯಂತಿಯೊಳ ಕಂಡೆನೆನುತ್ತ ಕೈಮುಗಿದ || ೨೦
ಕೇಳಿ ಶಿವಶಿವ ಯೆನುತ ಶೋಕವ |
ತಾಳಿ ತೆಗೆದಪ್ಪಿದಳು ಮಗಳ ವಿ |
ಟಾಳಿಸಿತೆ ನಿಜರಾಜ್ಯಸಿರಿ ನಿನಗಿಂತು ಬಲುವ್ಯಥೆಯ ||
ಭಾಳದಲಿ ವಿಧಿ ಬರೆದನೇ ಜನ |
ಪಾಲ ನಳನೃಪನೆತ್ತ ಸರಿದನೊ |
ಕಾಲಗತಿಯಿಂತಾದುದೇ ಹಾಯೆನುತ ಮಱುಗಿದಳು || ೨೧
ಬಾಲೆ ಬಿಡು ಶೋಕವನು ಭೀಮನೃ |
ಪಾಲನರಸಿಗೆ ತಂಗಿ ತಾ ತ |
ನ್ನಾಲಯದಿ ಕಡುನೊಂದೆ ಮಗಳೇ ಸಾಕು ನಮ್ಮೊಡನೆ ||
ಪೇಳದಿಪರೆ ಸುನಂದನಿಗೆ ಸಮ |
ಪಾಳಿ ನೀನೆಮಗೆಂದು ತಕ್ಕೈಸಿ |
ಪಾಲಿಸಿದಳತಿಕರುಣದಲಿ ದಮಯಂತಿಯನು ಜನಸಿ ೨೨
ಕಿಱಿಯ ತಂದೆ ಸುಬಾಹು ಮಱುಗುತ |
ವರಕುವರಿ ದಮಯಂತಿಗೆಂದನು |
ಪುರುಷನಿಲ್ಲದೆ ಚಿಂತೆಯಿಂದೆಲ್ಲವನು ನೀ ತೊಱೆದು ||

ಕರಗಿ ಕಂದಿದೆ ಮಗಳೆ ತಾನಿಂ |
ತೆಱೆದುದಿಲ್ಲ ಕಟ ಪುರುಷನ |
ಕರೆಸಿ ಕೊಡಿಸುವೆನಿದಕೆ ಚಿಂತಿಸಬೇಡ ಬಾರೆಂದ || ೩೩

ತರಳೆಯನು ಸಂತೈಸಿ ಕಣ್ಣಿನೊ |
ಳೊಱೆವ ಕಂಬನಿಗಳನು ಸೆಱಗಿನೊ |
ಳೊಱೆಸಿ ದಮಯಂತಿಯನು ಮನ್ನಿಸಿ ಬಂದನೋಲಗಕೆ ||
ಕರೆಸಿದನು ಭೂಸುರ ಸುದೇವನ |
ನಿರುಪಮಿತಭೂಷಣಗಳಿಂದುಪ |
ಚರಿಸಿ ಕಳುಹಲು ಬಂದ ಭೀಮನೃಪಾಲನೋಲಗಕೆ || ೩೪

ಅರಸ ಕೇಳು ವಿದರ್ಭಪತಿ ಮನ |
ಮಱುಗುತಿರಲಾಸಮಯದಲಿ ಭೂ |
ಸುರಸುದೇವನು ಬಂದು ಕೈಮುಗಿದೆಂದನೀಪದನ ||
ತರುಣಿ ದಮಯಂತಿಯನು ಕಂಡೆನು |
ಹರುಷ ಮಿಗಿಲಾಚೈದ್ಯಪುರದಲಿ |
ವರಜನನಿ ಚಿಕ್ಕಮ್ಮನಲ್ಲಿಹಳೆಂದನಾವಿಬುಧ || ೩೫

ಕಂಡು ಮಾತಾಡಿದೆನು ಸತಿಯಳ |
ಮಂಡೆ ಮಾಸಿದ ಮಲಿನ ವಸನದ |
ಗಂಡನಗಲಿದ ಚಿಂತೆಯಲಿ ಮುಱಿದ ಬಾಡಿ ದೇಹವನು ||
ದಂಡಿಸಿದಳನ್ನದಲಿ ಮನ ಮುಂ |
ಕೊಂಡುದಾಸತಿಗಿಸಿಯನನು ನೆರೆ |
ಕಂಡು ಹೇಳುವರಾರೆನುತ ಮಱುಗುವಳು ಮನದೊಳಗೆ || ೩೬

ಕೇಳುತರಸನ ವದನಕಾಂತಿ ವಿ |
ಶಾಲವಾದುದು ಮನದಿ ಹರುಷವ |
ತಾಳಿ ಹೊಂಪುಳಿವೋಗಿ ಭೀಮನೃಪಾಲ ಕರೆಸಿದನು ||
ಬಾಲೆಯುರ ತನ್ನಾಪ್ತಸಚಿವರ |
ಮೇಳದಲಿ ನಿಜಸುತೆಯ ಕರತರ |
ಹೇಳಿ ರತ್ನಾಭರಣಗಳನಿತ್ತವರ ಕಳುಹಿದನು || ೩೭

ಬಂದರಲ್ಲಿಗೆ ಚೈದ್ಯನೃಪತಿಯು |
ನಂದು ಕಾಣಿಸಿಕೊಂಡರವರನು |
ಮಂದಿರದ ಸುಕ್ಷೇಮವನು ಕೇಳಿದರೆ ಪೇಳಿದರು ||
ಇಂದುಮುಖಿ ದಮಯಂತಿಯನು ಕಳು |
ಹೆಂದು ಭೀಮನೃಪಾಲ ಪರುಷದೊ |
ಳಿಂದು ನಿಮಗುಡುಗೊಱೆಗಳನು ಕಳುಹಿದನು ಕೇಳೆಂದ || ೩೮

ಅರಸ ಕೇಳು ಸುಬಾಹುಭೂಪತಿ |
ಕರೆಸಿದನು ಮಂತ್ರಿಗಳ ಭೀಮನ |
ಪುರಕೆ ಪಯಣವ ಮಾಡಿದನು ದಮಯಂತಿಯನು ಕರೆದು ||
ತರುಣಿ ನೀ ನಮ್ಮಲ್ಲಿ ತಿಂಗಳು |
ಪೊರೆದೆ ದೇಹವ ಕಷ್ಟದಲಿಯೆಂ |
ದುರುತರದ ಪ್ರೇಮದಲಿ ಕೊಟ್ಟನು ಸಕಲಭೂಷಣವ || ೩೯

ತರಿಸಿದನು ದಂಡಿಗೆಯೊಳಗೆ ಕು |
ಳ್ಳಿರಿಸಿ ಸತಿಯರ ಗಡಣದಲಿ ಮುಂ |
ದಿರವ ಪೊಱಮಂಟರಸನೇಱಿದ ಗಜದ ಕಂಧರವ ||
ಮೊಱೆವ ನಾನಾವಾದ್ಯರಭಸದಿ |
ಕರಿತುರಗಕಾಲಾಳ ಸಂದಣಿ |
ಯುರವಣಿಸೆ ನಡೆತಂದು ಪೊಕ್ಕ ವಿದರ್ಭಪಟ್ಟಣವ || ೪೦

ದೂತರೈದಿದರೊಸಗೆಯಲಿ ಜನ |
ಜಾತ ನಲಿಯಲು ಬಂದು ಬೇಗದಿ |
ಭೂತಳೇಂದ್ರಗೆ ಕೈಮುಗಿದು ದಮಯಂತಿ ಬಂದಳೆನೆ ||
ಮಾತ ಕೇಳಿದನೇನು ಬಲಸಂ |
ಗಾತಲೈತಂದವರ ಕಂಡತಿ |
ಪ್ರೀತಿಯಿಂ ತಕ್ಕೈಸಿ ಕರೆತಂದನು ನಿಜಾಲಯಕೆ || ೪೧

ಅವನಿಪತಿ ಕೇಳಾಪುರದೊಳು |
ತ್ಸವವನದನೇನೆಂಬೆನಂದಿನ |
ದಿವಸದೊಳಗರಮನೆಯೊಳಾದಮಯಂತಿಯನು ಜನನಿ ||

ತವಕದಿಂ ಬಿಗಿಯಪ್ಪಿದಳು ಬಾಂ |
ಧವರು ಸಂತೋಷಿಸಿದರನಿಬರು |
ಯುವತಿಯರು ನಿಜತನಯರಾಲಿಂಗಿಸಿದರಂಗನೆಯ || ೪೦

ಮಗನ ನೋಡಿದಳಿಂದ್ರಸೇನನ |
ತೆಗೆದು ತಕ್ಕೈಸಿದಳು ಕರೆದಳು |
ಮಗಳ ಚಂದ್ರಾಸ್ಯಳನು ತೊಡೆಯೊಳಗಿಟ್ಟು ಮಮತೆಯಲಿ ||

ಮೊಗವನೀಕ್ಷಿಸಿ ಮೊಲೆಗಳಲಿ ತೊಱೆ |
ದುಗುವ ಹಾಲಿನ ಜನನಿ ಮಿಗೆ ಸೀ |
ರೊಗುವ ಕಣ್ಣೀರಿನಲಿ ಸಂತೈಸಿದಳು ನಿಜಸುತರ || ೪೨

ಕಂತುಪಿತನೊಲುಮೆಯಲಿ ಧರಣೀ |
ಕಾಂತ ಭೀಮನೃಪಾಲ ಬಾಂಧವ |
ಸಂತತಿಯನಾದರಿಸಿ ಕಳುಹಿದನವರಸುಚಿತದಲಿ ||

ಸಂತತವು ನಿಜಪತಿಯನಗಲಿದ |
ಚಿಂತೆಯಲಿ ಮನಗುಂದಿದಳು ದಮ |
ಯಂತಿ ನೆನೆಯುತ್ತಿರ್ದಳಾವರಪುರದ ಚೆನ್ನಿಗನ || ೪೪

—— ಏಳನೆಯ ಸಂಧಿ ಮುಗಿದುದು. ——

## ॥ ಎಂಟನೆಯ ಸಂಧಿ ॥

---

**ಸೂಚನೆ** || ಸುರರ ದುಂದುಭಿ ಮೊಳಗೆ ಧರಣೀ |
ಸುರರುಲಿಯೆ ಮುರಹರನ ಕರುಣದಿ |
**ತರುಣಿ ದಮಯಂತಿಯಳನೊಡಗೂಡಿದನು ನಳನೃಪತಿ** ||

ಕೇಳಿದೈ ರಾಜೇಂದ್ರ ಧರ್ಮನೃ |
ಪಾಲ ಸಕಲವಿಭವವನು ತೊಱೆದು |
ಧೂಳಿ ಮುಸುಕಿದ ಮುಡಿಯು ಮಾಸಿದ ವಸನಗಳ ನೋಡಿ ||
ಕೇಳಿವಳು ಪೂರ್ವೋತ್ತರವ ಭೂ |
ಪಾಲನವನಿಯನುಳಿದು ಸಿನ್ನ ವ |
ನಾಲಯದೊಳಿಂತಗಲಿದನು ಹೇಳೆಂದಳಾಜನನಿ || ೧

ಕಪಟದಲಿ ಪುಷ್ಕರನು ರಾಜ್ಯವ |
ನಪಹರಿಸಿದನು ಜೂಜಿನಲಿ ನಳ |
ನೃಪತಿ ಸೋತಾರಣ್ಯಕೈದಿದನೊಂದು ವಸ್ತ್ರದಲಿ ||
ಗುಪಿತದಿಂ ಬರೆ ಮುಂದೆ ಪಕ್ಷಿಗ |
ಳುಪಮೆಯಲಿ ಕೊಂಡೊಯ್ದುವೊಲ್ಲಿಯ |
ಕೃಪಣತನದಲಿ ತನ್ನ ಸೀರೆಯೊಳೊಯ್ದನರ್ಧವನು || ೨

ಮಱೆದು ಮಲಗಿದೆ ರಾತ್ರಿಯಲಿ ಯೆ |
ಚ್ಚಱಸದೇ ನೃಪ ತೆರಳಿದನು ಕಾ |
ತರಿಸಿ ಕಂಬನಿಯೊಳಗೆ ಬಂದೆನು ಚೈದ್ಯನಗರಿಯಲಿ ||
ಕರುಣಿ ಚಿಕ್ಕಮ್ಮನಲಿ ತಿಂಗಳು |
ಪೊರೆದೆನೀದೇಹವನುಯಿಲ್ಲಿಗೆ |
ಕರೆಸಿದಿರಿ ನೀವೆನುತ ಕಂಬನಿದುಂಬಿದಳು [illegible] || ೩

ಏನನೆಂಬೆನು ತನ್ನ ಪುಣ್ಯವ |
ಹಾನಿಯನುಯೆಲೆ ತಾಯೆ ಲೋಕದ |
ಮಾನಿನಿಯರಾರುಂಟು ನನ್ನೊಲು ತೊಳಲಿ ಬಳಲಿದರು ||
ದಾನವಾಮರರೊಳಗೆ ಕಾಣೆ ಸ |
ಮಾನವೀ ನಳನೃಪಗೆ ಯಿನ್ನಿದ |
ಕೇನ ಮಾಡುವೆನೆನುತ ಕಂಬನಿದುಂಬಿದಳು ತರಳೆ || ೪

ಆರಿಗೆರಡೆಣಿಸಿದನೊ ಹಿರಿಯರ |
ಗಾಱುಗೆಡಿಸಿದನೋ ವೃಥಾ ಮು |
ನ್ನಾರ ನೋಂಪಿಗಪಾರವಿಘ್ನವ ಮಾಡಿ ಕೆಡಿಸಿದನೊ ||

ಆರನಳಲಿಸಿದೆನೊ ತಪೋವ್ರತ |
ರಾರ ಜರೆದೆನೊ ತನ್ನ ನಿಜಸಂ |
ಸಾರವೀತೆಱನಾಯ್ತು ಶಿವಶಿವಯೆನುತ ಮಱುಗಿದಳು || ೫
ಕ್ಷಿತಿಯೊಳೆಲ್ಲಿಹನೋ ನೃಪತಿ ಪರ |
ಸತಿಗೆ ಮನಸೋತನೋ ತಪಸಿನ |
ವ್ರತವ ಕೈಕೊಂಡಿಹನೊ ಅಸುರರ ಬಲೆಗೆ ಸಿಲುಕಿದನೋ ||
ವಿತಳಕಿಳಿದನೊ ಮರ್ತ್ಯಯಮರಾ |
ವತಿಗೆ ನಡೆದನೊ ತೋಱದು ನಳಭೂ |
ಪತಿಯ ಕಾಣದೆ ನನಗೆ ಗತಿಯೇನೆಂದಳಂದುಮುಖಿ || ೬
ಪತಿವಿಹೀನೆಗೆ ಸಲವ್ರವೇ ಸು |
ವ್ರತಸುಭೋಜನಸೌಖ್ಯಸುಖರಸಂ |
ಗತಿಗಳುಂಟೇ ತಾಯೆ ಭಾವಿಸಿ ನೋಡು ಚಿತ್ತದಲಿ ||
ಸತಿಯರಿಗೆ ಪತಿ ದೈವವೆಂದಾ |
ಶ್ರುತಿವಚನವಾಡುವ್ರದು ತನಗಾ |
ಪತಿಯನಗಲಿದ ಬಳಿಕ ಗತಿಯಿಲ್ಲೆಂದಳಿಂದುಮುಖಿ || ೭
ಧರೆಯೊಳೆಲ್ಲಿಹನೋ ವಿಚಾರಿಸಿ |
ಕರೆಸಿಕೊಡು ಯೆಲೆ ತಾಯೆ ತನ್ನಯ |
ಪುರುಷನಿಲ್ಲದ ಬಳಿಕ ಬಿಡುವೆನು ತನುವನೆಂದೆನಲು ||
ಮಱುಗಿದಳು ಮಗಳೆಂದ ಮಾತಿಗೆ |
ಕರಗಿ ಕಂಬನಿದೊಡೆದು ತನ್ನಯ |
ಪುರುಷನೊಡನಿಂತೆನಲು ಭೀಮನೃಪಾಲ ಚಿಂತಿಸಿದ || ೮
ಅರಸ ಕೇಳು ವಿದರ್ಭಪುರಪತಿ |
ಕರೆಸಿದನು ಭೂಸುರರನವರಿಗೆ |
ಪರಮವಸ್ತುವನಿತ್ತು ಕಳುಹಿದ ನಿಷಧಪತಿಯಿರವ ||
ಶರಧಿಮೇರೆಯೊಳೆಲ್ಲ ಶೋಧಿಸಿ |
ಕರೆದು ತಾರೆನಲವರು ಬರುತಿರೆ |
ಕರೆಸಿದಳು ದಮಯಂತಿಯವರೊಡನೆಂದಳೀಮಾತ || ೯

ನಳನೃಪತಿ ನಿಜರೂಪತೇಜವ |
ನುಳಿದು ತಾ ಪ್ರತಿರೂಪು ಧಾಳಿಪ |
ನಿಳೆಯೊಳಗ್ಗದ ಸಭೆಯೊಳಗೆ ನೀವೆಂಬುದೀನುಡಿಯ ||
ಪಳುವದಲಿ ಸತಿಯುಟ್ಟ ಸೀರೆಯ |
ಸೆಳೆಯುತರ್ಧವ ಕೊಂಡು ನಾರಿಯ |
ಕಳೆದು ಪೋದವರುಂಟೆಯೆನಲುತ್ತರವ ಪೇಳುವನು || ೧೦
ಆನುಡಿಯ ತಂದೆನಗೆ ನೀವನು |
ಮಾನವಿಲ್ಲದೆ ಪೇಳೆನುತ ಸ |
ನ್ಮಾನವಲಿ ಬೀಳ್ಕೊಟ್ಟಳಂಗನೆ ತೆರಳಿದರು ಬಳಿಕ ||
ಮಾನವೇಂದ್ರರ ಸಭೆಯ ನೋಡಿ ನಿ |
ಧಾನಿಸುತ ನಾನಾದಿಗಂತ |
ಸ್ಥಾನವಲಿ ನಗರಗಳ ಭೇದಿಸುತೈದಿದರು ಪಥವ || ೧೧
ಇಳೆಯುಮರರಲ್ಲಲ್ಲಿ ಗಿರಿವನ |
ಗಳ ನಿರೀಕ್ಷಿಸಿ ಕೆಲವು ಋಷಿಗಳ |
ನಿಳೆಯುಗಳ ನೋಡುತ್ತ ಕಾನನಗಳನು ಬೇಗವಲಿ ||
ಜಳಧಿಮೇರೆಯ ಮಧ್ಯವಲಿ ಭೂ |
ವಳಯವೆಲ್ಲವ ಶೋಧಿಸುತ ತನು |
ಬಳಲಿಕೆಯ ಭಾವಿಸದೆ ನಡೆದರು ಮುಂದೆ ಪಥವಿಡಿದು || ೧೨
ಮುಂದೆ ಬರುತಿರೆ ಕಂಡರೊಬ್ಬನ |
ಸಂದ ಯಾಚಕ ಭೂಸುರನನೆ |
ಲ್ಲಿಂದ ಬಂದಿರಿಯೆನಲಯೋಧ್ಯಾನಗರದಿಂದೆನಲು ||
ಕುಂದವಲ್ಲಿ ವಿಶೇಷವೇನುಂ |
ಟೆಂದೆನಲು ಪೇಳಿದನು ಮಱವಮ |
ನೆಂದ ವಿಪ್ರನ ಮಾತಿನಿಂದೈದಿದರಯೋಧ್ಯೆಯನು || ೧೩
ಮಱುದಿವಸ ಋತುಪರ್ಣ ಮುನಿಯು |
ಬ್ಬರು ಸಹಿತಲೋಲಗದೊಳಿರೆ ಕಂ |
ಡರು ಮಹಾಸಭೆಯೊಳಗೆ ಹೊಕ್ಕರು ನಿಂದು ಕೈನೆಗಹಿ ||

ಹಿರಿಯರಿವೆ ಸಾಮಾಜಿಕರು ಸ |
ಚ್ಚರಿತರಿದೆಲಾ ಕೇಳಿ ನೀವೆಂ |
ದರುತರದ ಗಂಭೀರವಾಕ್ಯದೊಳೆಂದನಾ ವಿಪ್ರ || ೧೪

ಹಳುವದಲಿ ಬಂದಲಸಿ ಮಲಗಿದ |
ಕುಲಸತಿಯ ವಸನದೊಳಗರ್ಧವ |
ಕಳೆದು ಕೊಂಡೊಯ್ದಗಲಿ ಪೋದವರುಂಟೆ ರಾತ್ರಿಯಲಿ ||
ಇಳೆಯನಾಳುವ ನೃಪರ ಸತ್ವದ |
ಬಳಕೆಗಿದು ಲೇಸಲ್ಲವೆನೆ ಮನ |
ವಳುಕಿ ನಸುನಗೆಯಿಂದ ನುಡಿದನುನ್ರೊಲಿದು ಬಾಹುಕನು || ೧೫

ಕ್ಷಿತಿಯಮರರೆಲ್ಲಿಂದ ಬಂದಿರಿ |
ಸತಿಯನಗಲಿದ ಬಾಹಿರನು ನಿಜ |
ಪತಿಯೆ ಸಾಕಂತಿರಲಿ ಬಿಡು ಋತುಪರ್ಣನೋಲಗದಿ ||
ಅತಿಶಯದ ನುಡಿಗೇಳ್ದವಕಟಾ |
ಸತಿಗೆ ವಂಚನೆಯಲ್ಲವದು ನಿಜ |
ಪತಿಗೆ ಕೊಱತೆಯದೆಂದು ಸೂಚಿಸಿ ನುಡಿದ ವಿಪ್ರರಿಗೆ || ೧೬

ಈತನಾರು ಕುರೂಪಿ ನೈಷಧ |
ನೀತನೋ ಸಭೆಯೊಳಗೆ ತಾನೀ |
ಮಾತನಾಡಲದೇಕೆ ಸಂಶಯವೆಸುತ ಮನದೊಳಗೆ ||
ಖ್ಯಾತರಾಲೋಚಿಸುತ ಬಂದರು |
ಭೂತಳಾಧಿಪಭೀಮನೃಪಸಂ |
ಜಾತೆಯನು ಕಂಡೆಱಗಿ ಕೈಮುಗಿದೆಂದರೀಪದನ || ೧೭

ದೇವಿಯರು ಚಿತ್ತೈಸಿದರೆ ಭುವ |
ನಾವಳಿಗಳೆಲ್ಲವನು ನೋಡುತ |
ಲಾವು ಮುಂದೈತರಲು ಕಂಡೆವಯೋಧ್ಯೆಯನು ಬಳಿಕ ||
ಭೂವರನ ಋತುಪರ್ಣರಾಯನ |
ಸೇವೆಯೊಳಗೆ ಕುರೂಪಿಯೊರ್ವನು |
ಜೀವಸಖನಾತಂಗೆ ಬಾಹುಕನೆಂಬ ನಾಮದಲಿ || ೧೮

ತುರಗನಿಕರದ ಶಿಕ್ಷೆಯಲಿ ಮಾಂ |
ದಿರದ ಬಾಣಸಿತನದ ಕೆಲಸದಿ |
ನೆರೆ ನಿಪುಣನೆಂದೆನಿಸಿ ಕೊಂಡಿಹ ನೃಪನ ಸಭೆಯೊಳಗೆ ||
ಪರುತವಿಸಿ ಸೀವೆಂದ ಮಾತಸು |
ವರಸಭಾಮಧ್ಯದಲಿ ನುಡಿಯು |
ಲ್ಕಿರದೆ ತಾನೀಮಾತನೆಂದನು ನಗುತ ಬಾಹುಕನು || ೧೯

ಸತಿಗೆ ವಂಚನೆಗೈದ ಪತಿ ತಾ |
ಮತಿವಿಕಳನಂತಿರಲಿ ಭೂಸುರ |
ಪತಿಯೆ ಕೇಳಾಸತಿಗೆ ಭಂಗವೆ ಪತಿಗೆ ಕೊರತೆ ಕಣಾ ||
ಪತಿವ್ರತವನಾಚರಿಸುವಳು ನಿಜ |
ಪತಿಯು ಗುಣದೋಷಗಳನೆಣಿಸರೆ |
ಗತಿಗೆ ಕಾರಣ ಸತ್ಯವೇ ತನಗೆಂದನವ ನಗುತ || ೨೦

ಪತಿಯು ತಪ್ಪೆಣಿಸುವಳು ತಾ ಪತಿ |
ವ್ರತೆಯೆ ಧರಣಿಯು ಪಾಲಿಸುವ ಜನ |
ಪತಿಯು ನಿಂದಿಸುವಾತ ಸೇವಕನೇ ನಿಧಾನಿಸಲು ||
ಪಿತನ ವಾಕ್ಯವನತಿಗಳೆವವನು |
ಸುತನೆ ಗುರುವಿಂಗೆರಡೆಣಿಸುತಿಪ |
ಮತಿವಿಕಳನನ ಶಿಷ್ಯನೇ ಕೇಳೆಂದ ಬಾಹುಕನು || ೨೧

ಎನಲು ತಲೆದೂಗಿದಳು ಈಮಾ |
ತಿನಲಿ ಸಂಶಯವಿಲ್ಲ ಬಾರೆಂ |
ದೆನುತ ಕಂಬನಿಮುಂಬಿದಳು ದಮಯಂತಿ ಮನದೊಳಗೆ ||
ಇನಿಯನಪುದಾತನ ಪರೀಕ್ಷೆಗೆ |
ನೆನೆಯಬೇಕೊಂದನುವನೆಂದಾ |
ವನಿತೆ ತಂದೆಯನುಜ್ಞೆಯಲಿ ಕರೆದಳು ಸುದೇವನನು || ೨೨

ಇಳೆಯಮರ ಬಾರೆಂದು ವಿವರವ |
ತಿಳುಹಿ ಪಯಣವ ಮಾಡಿ ಕಳುಹಲು |
ಹೊಳಲ ಹೊರವಂಟನು ಸುದೇವನು ಹಲವು ಯೋಜನವ ||

ಕಳೆದು ಬರುತಿರೆ ಮುಂದೆ ಕಂಡನು |
ಲಲಿತರತ್ನಪ್ರಭೆಯ ಗೋಪುರ |
ಹೊಳೆವಯೋಧ್ಯಾಪುರವನೀಕ್ಷಿಸಿ ಹೊಕ್ಕನವನಂದು ‖ ೨೩
ಇಟ್ಟ ಫಣೆಯೊಳಗೆಸೆವ ಪಟ್ಟೆಯು |
ತೊಟ್ಟ ಹೊಸ ಯಜ್ಞೋಪವೀತವ |
ಕಟ್ಟಿಯಿರುಕಿದ ಕಕ್ಷಪಾಳದ ಬೆರಳ ಜಪಸರವ ‖
ಉಟ್ಟಧೋತ್ರದ ಬಳಲುಗಚ್ಚೆಯು |
ಅಟ್ಟಹಾಸದನಗೆಯ ಜನಗಳ |
ನಿಟ್ಟಿಸುತ ಪರಮೇಷ್ಠಿಯಂದದಿ ಬಂದನೋಲಗಕೆ ‖ ೨೪
ಆರು ನೀವೆಲ್ಲಿಂದ ಬಂದಿರಿ |
ದೂರದೇಶದ ಮಹಿಮರಿಳೆಯೊಳು |
ಕಾರಣವದೇನಿರುವುದಲ್ಲಿ ವಿಶೇಷವೇನುಂಟು ‖
ಭೂರಮಣ ಕೇಳನಿಯುಲಿ ಸಂ |
ಚಾರಿಸುತ ಬಂದೆವು ವಿದರ್ಭಕೆ |
ಭೂರಿನೃಪರೈತರುತಲಿರುವರು ಭಟರ ಗಡಣದಲಿ ‖ ೨೫
ದೇಶದೇಶದ ಯಾಚಕರು ಧರ |
ಣೀಶರಗಣಿತತುರಗಗಜರಥ |
ಭೂಸುರರು ಮಂತ್ರಿಗಳು ದೈವಜ್ಞರು ಸುಗಾಯಕರು ‖
ಭಾಸುರದ ತೇಜದಲಿ ಜನ ಸಂ |
ತೋಷದಲಿ ನಡೆತರುತಲಿದೆ ಪರ |
ವಾಸುದೇವನೆ ಬಲ್ಲ ದಮಯಂತಿಯ ಸ್ವಯಂವರವ ‖ ೨೬
ಶಯನದಲಿ ಮಲಗಿರ್ದವಳನಡ |
ವಿಯಲಿ ನಳನೃಪನಗಲಿ ಪೋಗಲು |
ನಯವಿಹೀನನಿಗಾಗಿ ರಚಿಸಿದರಾಸ್ವಯಂವರವ ‖
ಪಯಣ ನಿಮಗುಂಟೇಗಳೆನೆ ನೃಪ |
ಬಯಸಿ ಹೆಣ್ಣಿನ ಮೋಹದಲಿ ವಾ |
ಜಿಯ ವರೂಥಕೆ ಹೂಡಹೇಳಿದ ಕರೆಸಿ ಬಾಹುಕನ ‖ ೨೭

ಹೈ ಹಸಾದವೆನುತ್ತ ವಂದಿಸಿ |
ಬಾಹುಕನು ಮಂದಿರಕೆ ಬಂದು ವಿ |
ವಾಹಮುಂಟೇ ಮರಳಿ ದಮಯಂತಿಗೆ ಜಗನ್ನಾಥ ||
ಈ ಹದನವಾರಿಂದಲಾದುದೊ |
ದ್ರೋಹಿ ದಮಯಂತಿಯಳೊ ಇದು ಸಂ |
ದೇಹವಾಗಿದೆಯೆನುತ ಚಿಂತಿಸಿ ಬಂದನರಮನೆಗೆ || ೧೮

ಲಾಯದೊಳಗುತ್ತಮದ ತೇಜಿಯ |
ನಾಯ್ದು ಹೂಡಿದ ರಥಕೆ ಸೇರಿಸಿ |
ವಾಯುವೇಗದ ತೇರ ನಿಲಿಸಿದ ತಂದು ನೃಪನೆಡೆಗೆ ||
ರಾಯನೇಱಲು ಕರಿತುರಗರಥ |
ಪಾಯದಳ ಸಂದಣಿಸಿದುದು ನೆಲ |
ಬಾಯ ಬಿಡೆ ಹೊಱವಂಟ ನೃಪ ಘನವಾದ್ಯರಭಸದಲಿ || ೧೯

ಜನಪನೆಂದನು ಬಾಹುಕಗೆ ಮಾ |
ನಿನಿಯ ನೀಕ್ಷಿಸಬೇಕು ನಿಲ್ಲದು |
ಮನವಿದೊಂದೇ ದಿನಕೆ ನಡೆಸು ವಿದರ್ಭಪುರವರಕೆ ||
ಎನಲು ನಕ್ಕನು ಮನದೊಳಗೆ ತ |
ನ್ನಿನಿಯಳಿಗೆ ವಿಧಿ ಬರೆದನೇ ಶಾ |
ಸನವ ಮೀಱುವರಾರೆನುತ ಮಱುಗಿದನು ನಳನೃಪತಿ || ೨೦

ಕರದ ವಾಘೆಯ ಸಡಿಲ ಬಿಡೆ ಮುಂ |
ಬರಿದು ಚಿಮ್ಮಿದುವಡಿಗಡಿಗೆ ರಥ |
ತುರಗ ಹಾಯ್ದುದು ತೇರು ಮುಂದಕೆ ಪವನವೇಗದಲಿ ||
ಭರದೊಳೈತರೆ ನೃಪನ ಪಚ್ಚಡ |
ಧರೆಗೆ ಬೀಳಲು ಸಾರಥಿಗೆ ಯೆ |
ಚ್ಚಱಿಸಿದನು ಋತುಪರ್ಣನಿದಕಿನ್ನೇನು ಹದನೆನುತ || ೨೧

ಜೀಯ ಚಿತ್ತೈಸುರವಣಿಸಿ ನಿ |
ರ್ದಾಯದಲಿ ಹಿಂದುಳಿದುದಂಬರ |
ವಾಯುಗತಿಯಲಿ ದಾಟಿ ಬಂದೆವು ಹಲವು ಯೋಜನವ ||

ಹೋಯಿತಾವಮಾತೇಕೆ ನಡೆಯೆನೆ |
ರಾಯ ಮೆಚ್ಚಿದ ಸಾರಥಿಯ ಬಿರು |
ದಾಯಕನು ನೀನೆಂದು ಕೊಂಡಾಡಿದನು ಬಾಹುಕನ || ೨೦
ಮುಂದೆ ಕಂಡನು ಬರುತಲಡವಿಯೊ |
ಳೊಂದು ತಾರೆಯ ಮರನನವಱೊಳು |
ಸಂದ ಫಲಪರ್ಣಂಗಳೆಣಿಸದೆ ಸೂತ ಹೇಳೆನಲು ||
ಇಂದೆನಗೆ ಮತಿದೋಱದವನಿಪ |
ಕುಂದದಿದಱನುವೇಳು ನೀನೆನ |
ಗೆಂದೊಡಾಸಾರಥಿಗೆ ಲೆಕ್ಕವನಱುಹಿದನು ನೃಪತಿ || ೨೨
ಇಳಿದು ರಥವನು ಬಂದು ವೃಕ್ಷದ |
ಬಳಿಗೆ ನಿಂದಾಶಾಖೆಗಳಲಿಹ |
ಫಲದಳ ಪರ್ಣಂಗಳೆಣಿಸಿದ ಪದ್ಮಸಂಖ್ಯೆಯಲಿ ||
ಬಲಿದು ಲೆಕ್ಕವ ಕಂಡು ತಾ ಮನ |
ನಲಿದು ನಳನೃಪ ಪುಷ್ಕರನ ತಾ |
ಗೆಲುವ ಹದನಾಯ್ತೆನುತ ಬರೆ ಕಲಿಪುರುಷನಿದಿರಾದ || ೨೪
ಎಲೆ ನೃಪಾಲಕ ನಿನ್ನ ಸತ್ವದ |
ನೆಲೆಯನೀಕ್ಷಿಸಬೇಕೆನುತ ಬಂ |
ದಳಲಿಸಿದೆ ಹಿರಿದಾಗಿ ನೋಯದಿರಿನ್ನು ಚಿತ್ತದಲಿ ||
ತೊಲಗಿದೆನುಯೆಂದಿನಲಿ ಶುಭಮಂ |
ಗಳಕರವು ನಿನಗಪ್ಪುದೆನಲಾ |
ನಳನೃಪತಿ ಖತಿಗೊಂಡು ಶಾಪವ ಕೊಡದೆ ಮನ್ನಿಸಿದ || ೨೫
ಮಾನವಾಧಿಪ ಕೇಳು ಲೋಕಕೆ |
ದೀನಜನಬಾಂಧವನು ನಳನೃಪ |
ಕಾನನದಿ ಕಲಿಯತ್ತ ಕಳುಹಿಸಿ ಬಂದು ರಥವೇಱಿ ||
ಆನರೇಂದ್ರಂಗಶ್ವಹೃದಯವ |
ತಾನಱುಹಿ ಯಾತನಲಿ ಪಡೆದನು |
ಸಾನುರಾಗದಿ ಭೂರುಹದ ಹೃದಯವನು ನಿಮಿಷದಲಿ || ೨೬

ಕರದ ವಾಘೆಯಕೊಂಡು ನೃಪಗೆ |
ಚಕ್ಕಱಿಸಿ ನೂಕಿದ ತೇಜಿಗಳು ಪೊಂ |
ಕರಿಸಿ ಮನ ಮುಂಕೊಂಡು ಹಾಯ್ದವು ಬಿಟ್ಟ ಸೂಟಿಯಲಿ ||
ಭರದ ಗಮನವದೇನನೆಂಬೆನು |
ನೆರೆದ ಜನವಲ್ಲಲ್ಲಿ ನಿಂದುದು |
ಧರೆಯೊಳೀ ಸಾರಥಿಗೆ ಸರಿಯಾರರಸ ಕೇಳೆಂದ || ೩೭

ತುರಗಹೇಷಾರವವು ಗಾಲಿಯ |
ಧರಧುರದ ಚೀತ್ಕೃತಿಯು ಸಾರಥಿ |
ಯುರವಣೆಯು ರಥದಚಕ್ರಗಳ ಝೇಂಕಾರನಾದವಲಿ ||
ಭರದಿ ಕೆಂದೂಳಿಡುತ ಬರಲಾ |
ಪುರಜನರು ಸಂದಣಿಸಿ ನೋಡಲು |
ಪರಿಚರರು ಬಂದರು ವಿದರ್ಭನೃಪಾಲಗಱುಹಿದರು || ೩೮

ಬಂದನೀ ಋತುಪರ್ಣನೆನುತಾ |
ನಂದ ಮಿಗೆ ಕರೆಸಿದನು ಸಚಿವರ |
ಮಂದಿಯನು ಕಳುಹಿಸಲು ಕರೆತಂದರು ನಿಜಾಲಯಕೆ ||
ಸಂದಣಿಯ ಪರಿಹರಿಸಿಸಮ್ಮದ |
ದಿಂದ ಬೀಱರಮನೆಯೊಳುಲುಪೆಗ |
ಳಿಂದಯೋಧ್ಯಾಪತಿಯ ಸತ್ಕರಿಸಿದನು ಭೀಮನೃಪ || ೩೯

ಕೇಳಿದಳು ದಮಯಂತಿ ವಾರ್ತೆಯ |
ತಾಳಿದಳು ಹರುಷವನು ಮನದಲಿ |
ಫಾಲಲೋಚನನಿಂದ ಫಲಿಸಿತು ಪುಣ್ಯವೆನಗಿಂದು ||
ಬಾಲೆ ಕೇಳೆನಗಿಂದು ಶೋಕ |
ಜ್ವಾಲೆ ಪರಿಹರವಾಯ್ತು ಮಂಗಳ |
ದೇಳಿಗೆಯು ಪಸರಿಸಿತು ಶುಭಕರವೆಂದಳಿಂದುಮುಖಿ || ೪೦

ಖಿನ್ನನಾವನು ಚಿತ್ತದಲಿ ಋತು |
ಪರ್ಣ ಭೂಸುರನೆಂದ ಮಾತಿನ |
ಬಿನ್ನಣಕೆ ಮರುಳಾಗಿ ನಾಚಿಕೆಗೆಟ್ಟುಬಂದೆನೆಲಾ ||

ಭಿನ್ನವಿಲ್ಲದೆ ಕೊಂಡ ನಾಚಿಕೆ |
ಗಿನ್ನು ಹದನೇನೆನುತ ಗುಣಸಂ |
ಪನ್ನ ಮಱುಗಿದ ತನ್ನ ಮನದ ದುರಂತಚಿಂತೆಯಲಿ || ೪೦
ಓಲಗವನಿತ್ತನು ವಿದರ್ಭನೃ |
ಪಾಲ ಕರೆಸಿದ ಮಂತ್ರಿಬಾಂಧವ |
ಜಾಲವನು ಋತುಪರ್ಣ ಬಂದನು ಬಾಹುಕನಸಹಿತ ||
ಸಾಲುಮಣಿಪೀಠದಲಿ ಕುಳ್ಳಿರೆ |
ಬಾಲೆಯರ ಸಂಗೀತನೃತ್ಯದ |
ಕೇಳಿಮೇಳದಿ ರಂಜಿಸಿತು ಭೂಪಾಲನಾಸ್ಥಾನ || ೪೧
ನಾರಿಯರ ಮಱೆಗೊಂಡು ಸಭೆಯಲಿ |
ಸಾರಥಿಯ ಕುಬ್ಜಾವತಾರವ |
ನೋರೆಗಣ್ಣಿನೊಳೀಕ್ಷಿಸುತ ದಮಯಂತಿ ಮನದೊಳಗೆ ||
ಅರಿವನು ನಳನೃಪನ ಪೋಲುವ |
ಚಾರುಚಿಹ್ನೆಗಳಿಲ್ಲ ತೋರ್ಕೆವಿ |
ಕಾರವಾಗಿದೆ ರೂಪೆನುತ ಚಿಂತಿಸಿದಳಿಂದುಮುಖಿ || ೪೨
ಬರೆದೊರೆದು ನೋಡಿದಳು ನೂತನ |
ಸಿರಿಮೊಗದ ಕಾಂತಿಯನು ಕಳೆಗುಂ |
ದಿರುವ ಕಾಯುವ ಕಪ್ಪಿನಿಂದುದುರಿರ್ದ ರೋಮದಲಿ ||
ಪರಿಕಿಸಲ್ಕೀರೂಪ ಕೈಕೊಂ |
ಡಿರುವನೇ ನಳನೃಪತಿ ಶಿವಶಿವ |
ಮುರಹರನು ತಾ ಬಲ್ಲನೆಂದುಮ್ಮಳಿಸಿದಳು ತರಳೆ || ೪೩
ಹರೆದುದೋಲಗವಲ್ಲಿ ನಿಜಮಂ |
ದಿರಕೆ ಬಂದಾಲೋಚಿಸುತ ಮಿಗೆ |
ತರುಣಿಯರ ಕಳುಹಿಸಲು ಬಂದರು ಬಾಣಸಿನ ಮನೆಗೆ ||
ಇರವ ಕಂಡರು ಪಾಕದಲಿ ಕೈ |
ಕರಣವನು ನೆರೆನೂಪಕಾಱನ |
ಪರಿಯ ಹೊಗಳುತ ಬಂದು ಬಿನ್ನೈಸಿದರು ಭಾಮಿನಿಗೆ || ೪೪

ತಾಯೆ ಚಿತ್ತೈಸಿನ್ನವನ ಕರ |
ಣಾಯತವನೇನೆಂಬೆ ಲೋಕದ |
ಸ್ತ್ರೀಯರೊಳಗಿನಿತಿಲ್ಲ ರಚಿಸುವ ಶಾಕಪಾಕದಲಿ ||
ಮಾಯವನು ಮಿಗೆ ತಿಳಿಯಲರಿಯದು |
ಪಾಯದಿಂದೀಕ್ಷಿಸಲು ಸಕಲರ |
ಸಾಯನವು ಪರಿಪಕ್ವವಾಗಿವೆ ಪೇಳಲರಿದೆಮಗೆ || ೪೬

ದಾದಿಯರು ಬಾಹುಕನ ಗುಣಗಳ |
ಭೇದಿಸಿದರೊಂದೊಂದು ಬಗೆಯ ತ |
ಳೋದರಿಗೆ ಬಿನ್ನೈಸೆ ನಿಶ್ಚೈಸಿದಳು ದಮಯಂತಿ ||
ಆದಡವ ನಳನಹುದು ಗುಣದಲಿ |
ಭೇದಿಸುವೆನಿನ್ನೊಮ್ಮೆ ಯೆನುತ ವಿ |
ನೋದದಿಂದಾಡುವ ಕುಮಾರರ ಕರೆಸಿದಳು ತರುಣಿ || ೪೭

ತರಳರಿಗೆ ನೀರೆಱೆದು ಕಾಂಚನ |
ವರದುಕೂಲವನಿತ್ತು ದಿವ್ಯಾ |
ಭರಣಭೂಷಿತರಾದ ತನಯರ ದಾದಿಯರ ಕೈಯ ||
ಪಿರಿದು ಕಳುಹಲು ಬಾಣಸಿನ ಮಂ |
ದಿರದ ಬಾಗಿಲ ಮುಂದೆ ಬಿಡೆ ಸಂ |
ಚರಿಸಿ ಸುಳಿದಾಡುವರ ಕಂಡನು ನೃಪತಿ ಹರುಷಿಸುತ || ೪೮

ತರಳರನು ಪಿಡಿದೆತ್ತಿ ತೊಡೆಯೊಳ |
ಗಿರಿಸಿ ಮುದ್ದಾಡಿದನು ನೋಡುತ |
ಸುರಿವ ಕಂಬನಿಗಳಲಿ ಬಾಹುಕ ಮಱುಗುತಿರಲಂದು ||
ಮಱೆಯ ಜಾಲಂದ್ರದಲಿ ಕಂಡಳು |
ತರುಣಿ ನಳನೃಪನೀತನಹುದೆಂ |
ದುರುತರದ ಪ್ರೇಮದಲಿ ಬಂದಳು ಜನನಿಯರಮನೆಗೆ || ೪೯

ತಾಯೆ ಸಂಶಯವಿಲ್ಲ ನೈಷಧ |
ರಾಯನೀತನು ಸೂತನಲ್ಲವಿ |
ಡಾಯದಲಿ ಬಂದಿಹನು ನೋಡು ಕುರೂಪಿವೇಷದಲಿ ||

ರಾಯರೊಳಗಗ್ಗಳೆಯ ನಳನೃಪ |
ಮಾಯುವನು ತೋಱುಹನುಯಿವನ ಸಿ |
ಜಾಯತವನಾಬಲ್ಲೆ ಕರೆಸೆಂದಳು ಸರೋಜಮುಖಿ || ೫೦
ಧರಣಿಪತಿಯನುಮತದೊಳಾತನ |
ಕರೆಸಿದಳು ನೃಪನರಸಿ ಬಾಹುಕ |
ನಿರದೆ ಬಂದನು ರಾಜಮಂದಿರದಲ್ಲಿ ಕುಳ್ಳಿರಲು ||
ತರಳೆ ಮಾಸಿದ ಸೀರೆಯಲಿ ಗರ |
ಗರಿಕೆ ತಪ್ಪಿದ ಚೆಲುವಿನಲಿ ಸಿಂ |
ಬಿರಲು ಕಂಡನು ಸತಿಯ ತಲೆಬಾಗಿನನು ಲಜ್ಜೆಯಲಿ || ೫೧
ಹಿಮಕರಾನ್ವಯತಿಲಕ ವಸುಧಾ |
ರಮಣ ಪುಣ್ಯಶ್ಲೋಕನು ಸುಭಾಷಿತ |
ವಿಮಲಗುಣಚಾರಿತ್ರ ಸನ್ನುತಸತ್ಯಸಂಚಾರ ||
ಕುಮತಿ ಪುಷ್ಕರ ಮುನಿವನೇ ವಿ |
ಕ್ರಮದರಿದ್ರತೆ ಬಂದುದೇ ಸಾ |
ಕಮಿತಭುಜಬಲ ಪಾಲಿಸೆಂದಳು ಪತಿಗೆ ದಮಯಂತಿ || ೫೨
ಮುನ್ನ ಮಾಡಿದ ಕರ್ಮಫಲ ಋತು |
ಪರ್ಣನಲಿ ಸೇವೆಯನು ಮಾಡುವು |
ದುನ್ನತಿಕೆಯಲಿ ಬಂದುದೇ ಮಿಗೆ ಸಾರ್ವಭೌಮರಿಗೆ ||
ತನ್ನ ಪುಣ್ಯದ ಹಾನಿ ತಾಸಿದ |
ಕಿನ್ನು ಬಳಲುವುದೇನು ಗುಣಸಂ |
ಪನ್ನ ರಕ್ಷಿಸು ಸತಿಯನೆಂದೆಱಗಿದಳು ಪದಯುಗಕೆ || ೫೩
ತುಱುಬ ಹಿಡಿದೆತ್ತಿದನು ಸತಿಯಳ |
ಸುರಿವ ಕಂಬನಿದೊಡೆದು ನುಡಿದನು |
ಬಱಿದೆ ಚಿಂತಿಸಲೇಕೆ ಮಾನಿನಿ ಬಿಡು ಮನೋವ್ಯಥೆಯ ||
ಅಱಿಯದವಳೇ ನೀನು ಲೋಕದ |
ಸರಸಿಜಾಕ್ಷಿಯರೆಲ್ಲರಿಗೆ ವರ |
ಗುರುವಲಾ ನೀ ಬಱಿಗೆಯೆನ್ನನು ಬಯಸಬೇಕೆಂದ || ೫೪

ವಿನಯಹೀನನು ತಾನು ಮನದಲಿ |
ನೆನೆದು ತಪ್ಪಿದ ನಿರ್ದಯನು ಕಾ |
ನನದಿ ನಿನ್ನನು ಬಿಸುಟು ಕಳೆದ ದುರಾತ್ಮ ಬಾಹಿರನ ||
ನೆನೆವರೇ ಬಿಡು ಮರುಳೆ ನಿನಗಿಂ |
ದಿನಲಿ ಮಾಳ್ಪ ಪುನಸ್ಸ್ವಯಂವರ |
ಮನಕೆ ಸರಿ ಬಂದವನ ನೀನೊಲಿಸೆಂದನಾನೃಪತಿ || ೩೩

ಎನಲು ಕರ್ಣಂಗಳಿಗೆ ಸಬಳದ |
ಮೊನೆಗಳಿಳಿವಂತಾಗೆ ಸತಿ ಕ |
ಣ್ಣಿನಲಿ ತುಂಬಿದಳುದಕವನು ಹರಹರ ಶಿವಾಯೆನುತ ||
ಎನಗೆಯಿನ್ನು ಪುನಸ್ಸ್ವಯಂವರ |
ಮನದೊಳುಂಟೇ ನೀವು ಬರಬೇ |
ಕೆನುತ ವಾರ್ತೆಯ ಕಳ್ಪಿಸಿದೆ ಕೇಳೆಂದಳಿಂದುಮುಖಿ || ೩೪

ನಂಬಿದೆನು ಲೇಸಾಗಿ ಮನದೊಳ |
ಗಿಂಬುಗೊಂಡನು ವಿಕೃತಿರೂಪಿನ |
ಡೊಂಬಿಯೇಕಿದು ಸಕಲಧರ್ಮವಿಚಾರವಂತರಿಗೆ ||
ಅಂಬುಜಾಕ್ಷನ ರೂಪಿಸಲಿ ಪ್ರತಿ |
ಬಿಂಬವಲ್ಲವೆ ನೀವು ಬರಿದಾ |
ಡಂಬರದ ನುಡಿಯೇಕೆ ಸಾಕಿನ್ನೆಂದಳಿಂದುಮುಖಿ || ೩೫

ನಡೆಯುತೆಡಹಿದ ಪಟ್ಟದಾನೆಯ |
ಮಿಡಿದು ಕೊಲ್ಲುವರುಂಟೆ ನಂಬಿದ |
ಮಡದಿಯಲ್ಲವೆ ತಾನು ಬಿಡುನುಡಿಯೇಕೆ ನಳನೃಪತಿ ||
ಅಡವಿಯಲಿ ಕಡುನೊಂದು ದೇಹವ |
ಬಿಡದೆಯುಳುಹಿದೆನಿನ್ನು ಪ್ರಾಣವ |
ಗೊಡವೆಯಿನ್ನೇಕೆನುತ ಕಂಬನಿಮುಂಬಿದಳು ತರಳೆ || ೩೬

ನೋಯೆ ನೊಂದಿಪ ಸತಿಯನಾಡಲು |
ನ್ಯಾಯವೇನಿದು ನಿಮಗೆ ಕೇಳಲೆ |
ರಾಯ ನಿಮ್ಮನು ನೋಡೆ ಕಳುಹಿದೆ ಚರರ ದಿಕ್ಕಿನಲಿ ||

ಮಾಯರೂಪಿದ ಕಾಣಲಾಱದೆ |
ಬಾಯ ಬಿಡುತಿರೆ ನಿನ್ನಯೋಧ್ಯೆಯ |
ರಾಯನಲಿ ನೂತನದ ಸಾರಥಿಯೆನಲು ಕೇಳಿದೆನು || ೫೯

ಆಗ ಭೂಸುರಪತಿ ಸುದೇವನ |
ಬೇಗಲಟ್ಟಿದೆ ನಿಮ್ಮ ಬಳಿಗೆ ಸ |
ರಾಗದಿಂದುತ್ತರಕೆ ಪ್ರತ್ಯುತ್ತರವ ಪೇಳ್ದಿರಲಾ ||
ಈಗಲಿದು ಸಂಶಯವೆ ತಾನದ |
ಕಾಗಿ ಕರೆಸಿ ಸ್ವಯಂವರವ ನಿವು |
ಗಾಗಿ ಪೇಳಿಸಿದಱ ತಪ್ಪೇನೆಂದಳಿಂದುಮುಖಿ || ೬೦

ಜನಸುತನೆ ಕೇಳಾದಿಯಲಿ ಯ |
ವ್ವನವ ನಿನಗೊಪ್ಪಿಸಿದೆನಲ್ಲದೆ |
ತನು ಮನೋವಾಕ್ಕಾಯಕರ್ಮಂಗಳಲಿ ತಾನೆರಡ ||
ನಿನಗೆ ನೆನೆದವಳಲ್ಲ ನೀನೇ |
ನನಗೆ ಗತಿಯೆಂದಿಪುದನಱಿಯಾ |
ಜನಪ ರಕ್ಷಿಸು ಕೈವಿಡಿದು ಸಲಹೆಂದಳಿಂದುಮುಖಿ || ೬೧

ಇದಕೆ ಯಮವರುಣಾನಿಲೇಂದ್ರರು |
ಮದನಜನಕನು ಸಾಕ್ಷಿಯೆನೆ ಮೇ |
ಘದಲಿ ನುಡಿದನು ವಾಯು ನಳನೃಪನೊಡನೆ ಸತ್ಯವನು ||
ಚದುರ ಕೇಳ್ದಮಯಂತಿ ಲೋಕದ |
ಸುವತಿಯೇ ತಿಳಿ ಲೋಕಪಾವನೆ |
ಯಿದಕೆ ಸಂಶಯವೇಕೆ ಪಾಲಿಸು ಸತಿಯ ನೀನೆಂದು || ೬೨

ಪವನನಾಡಿದ ನುಡಿಯ ಕೈಕೊಂ |
ಡವನಿಪತಿ ಬಿನ್ನೈಸಿದನು ಕೈ |
ತನಕದಲಿ ಕಲಿಯಿಂದ ನೊಂದೆನು ನಿಮ್ಮ ದರುಶನದಿ ||
ಬವಣೆ ಹಿಂಗಿ ಕೃತಾರ್ಥನಾದೆನು |
ಯೆನಗೆಯಿನ್ನೇನುತ ಪಕ್ಷಿಯ |
ಹವಣ ಮನದಲಿ ನೆನೆಯೆ ಬಂದುದು ದಿವ್ಯಮಯವಸನ || ೬೩

ಧರಿಸಿದನು ನಳನಾದುಕೂಲವ |
ಪರಿಹರಿಸಿತಾರೂಪು ಮುನ್ನಿನ |
ಪರಮತೇಜದ ದಿವ್ಯತನುವಿನೊಳೆಸೆದು ರಂಜಿಸಲು ||
ಸುರರು ದುಂದುಭಿ ಮೊಳಗೆ ಮಲ್ಲಿಗೆ |
ಯರಳ ಮಳೆ ಸೂಸಿದರು ಗಗನದಿ |
ಸುರಸತಿಯರಕ್ಷತೆಯ ತಳಿದರು ಹರಸಿ ನಳನೃಪಗೆ || ೬೪

ಸುರರು ಕೊಂಡಾಡಿದರು ಯಮಭಾ |
ಸ್ಕರವಿರಿಂಚಾದಿಗಳುಲಿಯೆ ವರ |
ತರುಣಿ ಬಂದೆರಗಿದಳು ಪತಿಯಂಘ್ರಿಯಲಿ ದಮಯಂತಿ ||
ಹರುಷದಲಿ ಬಿಗಿಯಪ್ಪಿದನು ಭೂ |
ಸುರರು ಸಂಭ್ರಮಿಸಿದರು ವರಪುರ |
ದರಸ ಚೆನ್ನಿಗರಾಯ ಸಲಹಿದನವರ ಕರುಣದಲಿ || ೬೫

ಎಂಟನೆಯ ಸಂಧಿ ಮುಗಿದುದು.

## || ಒಂಬತ್ತನೆಯ ಸಂಧಿ ||

ಸೂಚನೆ || ಕದನದಲಿ ಪುಷ್ಕರನ ಬಲವನು |
ಸದೆದು ಜೂಜಲಿ ಗೆಲಿದು ರಾಜ್ಯವ |
ಮುದದಿ ಪಾಲಿಸುತಿರ್ದನಾಸತಿಸಹಿತ ನಳನೃಪತಿ ||

ಕೇಳು ಪಾಂಡುಕುಮಾರ ನಳಭೂ |
ಪಾಲನಭ್ಯುದಯವನು ಮಂಗಳ |
ದೇಳಿಗೆಯನೇನೆಂಬೆ ದಮಯಂತಿಯ ಮನೋತ್ಸವವ ||
ಲೀಲೆಯಲಿ ಮಜ್ಜನವ ಮಾಡಿ ದು |
ಕೂಲಮಣಿಭೂಷಣವ ಧರಿಸಿ ಚ |
ಡಾಳಿಸುವ ಕಾಂತಿಯಲಿ ಸಿಂಹಾಸನದಿ ಕುಳ್ಳಿರ್ದ || ೧

ಈತನಾರು ಪಿತಾಮಹನೊ ಪುರು |
ಹೂತನೋ ಮನ್ಮಥನೊ ಲಕ್ಷ್ಮೀ |
ನಾಥನೋ ಚಂದ್ರಮನೊ ಶಂಕರನೋ ಮಹಾದೇವ ||

ಈತನೇ ನಳನೃಪತಿ ಭೂವಿ |
ಖ್ಯಾತನೆಲ್ಲಿಂದಿಲ್ಲಿ ಬಂದನು |
ಘಾತು ಮಝರೇ ಎನುತ ಕೊಂಡಾಡಿತು ನೃಪಸ್ತೋಮ ‖ ೧

ಬಂದು ಕಂಡುದು ನಿಖಿಳಪುರಜನ |
ವಂದು ಕಾಣಿಕೆಗೊಟ್ಟು ಮುದದಲಿ |
ಸಂದಣಿಸೆ ಋತುಪರ್ಣ ಬಂದನು ಮಂತ್ರಿಜನಸಹಿತ ‖
ಸಂದ ಮಣಿ ಕಾಂಚನ ಸುವಸ್ತ್ರವ |
ತಂದು ಸುಮುಖದೊಳಿರಿಸಿ ವಿನಯದಿ |
ನಿಂದು ಬಿನ್ನೈಸಿದನು ಕರಗಳ ಮುಗಿದು ನಳನೃಪಗೆ ‖ ೨

ಸೋಮಕುಲ ನೃಪಸಾರ್ವಭೌಮ ಸ |
ನಾಮಮಂಗಳನಿಳಯ ಜಿತಸಂ |
ಗ್ರಾಮಧೀರ ವಿರೋಧಿಸಾಮಜಸಿಂಹಳನಿಳಯ ‖
ತಾಮಸನು ಮತಿಗೇಡಿ ಮಾನವ |
ಪಾಮರನ ಗುಣದೋಷವೆಣಿಸದೆ |
ಪ್ರೇಮದಿಂದೊಲಿದೆನ್ನ ಸಲಹೆಂದೆನುತ ಕೈಮುಗಿದ ‖ ೪

ರೂಢಿಯಲಿ ನಾನಿಮ್ಮನರಿಯದೆ |
ಮೂಢಮತಿಯವಿವೇಕಿ ತುರಗವ |
ಹೂಡಿದಾಗಲೆ ರಥಕೆಯಡಿಗೆಯೊಳಿರಿದೆನೇತಾಸು ‖
ಮಾಡಿದಪರಾಧಗಳನೊಂದನು |
ನೋಡಲಾಗದು ಚಿತ್ತದಲ್ಲಿ ಭಯ |
ಖೋಡಿಯಿಲ್ಲದೆ ಸಲಹ ಬೇಕೆಂದೆರಗಿದನು ಪದಕೆ ‖ ೫

ಈಪರಿಯೊಳೆನಲಾನೃಪನ ಸಂ |
ತಾಪವನು ಪರಿಹರಿಸಿ ನಳನೃಪ |
ತಾ ಪಿರಿದು ಮಣಿಭೂಷಣಂಗಳನಿತ್ತು ನಸುನಗುತ ‖
ಕೋಪವೆನಗಿಲ್ಲೆಂದಯೋಧ್ಯಾ |
ಭೂಪನನು ಮನ್ನಿಸುವ ಸಮಯದಿ |
ತಾಪಸರನೊಡಗೊಂಡು ಬಂದನುವೊಲಿದು ಮೈತ್ರೇಯ ‖ ೬

ಬಂದ ಮುನಿಗವನೀಶಚರಣ |
ದ್ವಂದದಲಿ ಚಾಚಿದನು ಮುಕುಟವ |
ನಂದು ಪಿಡಿದೆತ್ತಿದನು ನಸುನಗುತಲ್ಲಿ ಕುಳ್ಳಿರ್ದು ||
ಎಂದನೆಲೆ ನಳನೃಪತಿ ನಿನಗೆ ಮು |
ಕುಂದನೊಲವು ಸದಾವಕಾಲದಿ |
ಸಂದಿರಲು ಯಿನ್ನಾವುದರಿದಿಲ್ಲೆಂದನಾಮುನಿಪ || ೭

ಕಲಿಪುರುಷನಿಂದಾದುದುಪಹತಿ |
ಲಲನೆಪುತ್ರರಸಗಲಿ ಕಷ್ಟವ |
ಬಳಸಿದೆಯಲಾನೊಂದು ಸತ್ಯವ ಬಿಡದೆ ಸಂಚರಿಸಿ ||
ಸುಲಭನಾದೆ ಕುಲಾಂಗನೆಯ ವ್ರತ |
ಫಲದ ಪುಣ್ಯೋದಯದಿ ನಿಜಸಿರಿ |
ಫಲಿಸಿತಿನ್ನೀಲೋಕದಲಿ ನಿನಗಾರು ಸರಿಯೆಂದ || ೮

ಹರಿಯು ನೆಲೆಗೆಡಿಸಿದನು ಪರಮೇ |
ಶ್ವರನ ಭಿಕ್ಷವನೆತ್ತಿಸಿದ ಸರ |
ಸಿರುಹಭವನನ ಶಿರವ ಹೋಗಾಡಿದನು ಪೂರ್ವದಲಿ ||
ಕರುಣಹೀನನು ನಿನ್ನ ಸೋಕಲು |
ತೆಱನ ಕಾಣದೆ ಹಲವುದಿನ ಕಾ |
ತರಿಸಿ ಛಲದಲಿ ತೊಡಚಿ ಬಿಟ್ಟನು ಮನದ ಭೀತಿಯಲಿ || ೯

ಎಲ್ಲ ನೃಪರಂತಲ್ಲ ಲಕ್ಷ್ಮೀ |
ವಲ್ಲಭನ ಪ್ರತಿಬಿಂಬ ನಿನ್ನಲಿ |
ನಿಲ್ಲ ಬಲ್ಲನೆ ಕಲಿಪುರುಷನತಿವೇಗ ತೆರಳಿದನು ||
ಸಲ್ಲಲಿತ ಸಾಮ್ರಾಜ್ಯಪದವಿಂ |
ದೆಲ್ಲ ನಿನಗಹುದೆಂದು ಧರಣೀ |
ವಲ್ಲಭನ ಸತ್ಕರಿಸಿ ಕೊಂಡಾಡಿದನು ಮೈತ್ರೇಯ || ೧೦

ಎಂದು ಹರಸಿದನವನಿಪಗೆ ಮುದ |
ದಿಂದ ಮಂತ್ರಾಕ್ಷತೆಗಳಲಿ ಮುನಿ |
ವೃಂದ ಸಂತೋಷಿಸಿತು ನೃಪಸಿಂಹಾಸನದೊಳಿರಲು |

ಇಂದುವದನೆಯರಾರತಿಯ ನಲ |
ವಿಂದಲೆತ್ತಿದರಲ್ಲಿ ಸತಿಯರು |
ಸಂದಣಿಸಿ ಪಾಡಿದರು ಶೋಭಾನವನು ಮನವೊಲಿದು || ೧೧

ಊದಿದುವು ಕಹಳೆಗಳು ಶಂಖವು |
ನಾದಿಸಿತು ಭೇರೀಮೃದಂಗವಿ |
ನೋದರವ ರಂಜಿಸಿತು ನಾನಾವಾದ್ಯರಥಸಹಿತ ||
ಮೋದಿನೀಶ್ವರರಾಗ ಮುಯ್ಯಗಳ |
ನೋಂದಿಸಿದರವನಿಪನ ಸತಿಗಿ |
ನ್ನೈದೆತನ ಮಿಗಲೆಂದು ಹರಸಿತು ಮುನಿನಿವಹಭೂಸಿಕರ || ೧೨

ಅರಸ ಕೇಳು ವಿದರ್ಭಪತಿ ಮುನಿ |
ವರರನುಪಚರಿಸಿದನು ಧರಣೀ |
ಸುರರಿಗಿತ್ತನು ಗೋಹಿರಣ್ಯಾಫಲಾದಿ ದಾನವನು ||
ಕರೆಸಿಕೊಟ್ಟನು ನೃಪತಿ ಸಕಲಾ |
ಭರಣಗಳ ಕರಿತುರಗರಥವನು |
ಪುರಜನರ ಸಂತೈಸಿ ಕಳುಹಿದನಖಿಳಬಾಂಧವರ || ೧೩

ಹರೆದುದೋಲಗವಲ್ಲಿ ಯಾಚಕ |
ವರರು ಕೊಂಡಾಡಿದರು ಧರಣೀ |
ಶ್ವರರು ಕಳುಹಿಸಿಕೊಂಡು ಸಹಪರಿವಾರ ತೆರಳಿದರು ||
ಮರುದಿವಸ ಋತುಪರ್ಣನೃಪ |
ಗೆರಗಿ ಕಳುಹಿಸಿಕೊಂಡಯೋಧ್ಯಾ |
ಪುರವ ಹೊಕ್ಕನು ಚೈದ್ಯಭೂಪತಿ ಮರಳಿದನು ಪುರಕೆ || ೧೪

ಇಂದುಮುಖಿ ದಮಯಂತಿಯೊಡನಾ |
ನಂದದಲಿ ನಳನೃಪತಿ ಮಾವನ |
ಮಂದಿರದೊಳೊರ್ಬರಿಸವಿದ್ದನು ಸಕಲವಿಭವದಲಿ ||
ಮುಂದೆ ನಮ್ಮಯ ನಿಷಧಪುರಿಗಿ |
ನ್ನೆಂದು ಗಮಿಸುವ ಹದನ ತಾನೆಂ |
ತೆಂದು ಭೀಮನೃಪಾಲನೊಡನಾಲೋಚಿಸಿದ ಹದನ || ೧೫

ದಂಡು ನಡೆಯಲಿ ನಿಷಧಪುರಿಗಾ |
ಭಂಡನಹ ಪುಷ್ಕರನ ಮಾತೇ |
ನಂಡಲೆದು ಫಲವಿಲ್ಲ ಸಾಕಿನ್ನೇಳಿಯೆಂದೆನುತ ||
ಮಂಡಲಾಧಿಪನೆನಲು ಭೂಪರ |
ತಂಡವೆದ್ದುದು ಕೂಡೆ ಭಟರು |
ದ್ದಂಡ ಕೈದುವ ಕೊಂಡು ನಡೆದರು ನಳನ ಸನ್ನೆಯಲಿ | ೧೬

ತುರಗ ಪಲ್ಲಣಿಸಿದುದು ರಥ ಮೋ |
ಹರಿಸಿ ತೆರಳಿತು ಸಂಗರಕೆ ಮದ |
ಕರಿಗಳಿಟ್ಟಣಿಸಿದುದು ಕಾಲಾಳಿರದೆ ಸಂದಣಿಸಿ ||
ನೆರೆದುದಗಣಿತಸೈನ್ಯ ಸಾಗರ |
ಮೊರೆವವೊಲ್ ಗಂಭೀರಭೇರಿಗ |
ಳುರವಣಿಸೆ ಹೊಱವಂಟ ನಳನೃಪನರಸ ಕೇಳೆಂದ || ೧೭

ತುರಗಚಯ ವೆಂಟಣಿಸಿ ಪೂಡಿದ |
ವರರಥಕೆ ಬಲವಂದು ಕೈದುವ |
ಧರಿಸಿಯೇಱಿದನರಸ ಮಂಗಳವಾದ್ಯರಭಸವಲಿ ||
ತೆರಳತಲ್ಲಿ ಮಹಾರಥರು ಸಂ |
ಗರಕೆ ಮುಂಚುವ ಭಟರ ಗಡಣದಿ |
ಧುರಕೆ ನಡೆದರು ಮುಂದೆ ಸಾರುವ ಗೌರಗಹಳೆಯಲಿ || ೧೮

ಇದುಕಣಾ ನಳನಂದು ವನವಾ |
ಸದ ಪಯಣವಾದಲ್ಲಿ ಮಕ್ಕಳ |
ಪದುಳದಿಂದೇಱಿಸಿ ವಿದರ್ಭಕೆ ಕಳುಹಿಬಿಟ್ಟ ರಥ ||
ಗದಗದಿಸ ನವರತ್ನನಿಚಯದೊ |
ಳುದಿಸಿ ಮೆಱೆವ ಸುವರ್ಣಕಲಶ |
ಮದನನ ನೆಲೆಯಿದೆನಿಸಿ ಮೆಱೆದುದು ವರವರೂಥವದು || ೧೯

ಹೊಳೆವ ಸಿಂಧದ ಸಾಲ ಝಲ್ಲರಿ |
ಗಳುರುಪತಾಕ ಛತ್ರಚಮರಾ |
ವಳಿಗಳಿಂದಲಿ ಧಾತುಗುಂದಿಮನಭ್ರತಳ ಮುಸುಕಿ ||

ಉಲಿವ ಮಂಗಳಪಾಠಕರ ಕಳ |
ಕಳಕೆ ಮಿಗೆ ಹೆಬ್ಬಲ ಛಡಾಳಿಸೆ |
ನೆಲ ಬಿಱಿಯಲ್ಕೈತಂದು ಬಿಟ್ಟುದು ನಿಷಧನಗರಿಯಲಿ || ೨೦

ದಾಳಿಯಿಟ್ಟರು ಹರಿದು ದಿಕ್ಕಿನ |
ಮೂಲೆಯವರಂಜಿವರು ಮುವ್ಮ್ರನೆ |
ಯಾಳು ಕವಿದನು ಹಿಡಿದು ನಗ್ಗದ ಸಿರಿಯ ಸೂಱೆಗಳ ||

ಕೇಳಿದನು ಪುಷ್ಕರನು ನಿಷಧನ |
ದಾಳಿ ಬರುತಿದೆ ಖತಿಯ ಭರದಲಿ |
ಕಾಳೆಗಕೆ ನಳನೃಪತಿ ಬಂದನೆಯೆನುತ ಮುಳಿಗೆದ್ದ || ೨೧

ಆಗಲವಕೇಸಿನ್ನು ರಾಜ್ಯವ |
ನೀಗಿವಳಲಿನೊಳೆಮ್ಮ ಕವನಕೆ |
ತಾಗಿದನು ತಪ್ಪೇನು ಬರಹೇಳೆಮ್ಮ ಸೈನಿಕವ ||

ಈಗಲೀತನ ಕಡಿದು ಸೆಱೆಗಳ |
ಬೇಗ ಹಿಡಿಯೆಂದೆನುತ ನಿಜಬಲ |
ಸಾಗರವ ನೆರಹಿದನು ಕಳುಹಿದನು ನಳಪತಿಯ || ೨೨

ಹರಿಗೆ ಖಡ್ಗ ಕಠಾರಿ ತೋಮರ |
ಪರಶು ಮುದ್ಗರ ಕುಂತ ಶಲ್ಲೆಹ |
ಪರಿಘ ಚಕ್ರ ತ್ರಿಶೂಲ ಕಕ್ಕಡ ಭಿಂಡಿವಾಳಚಯ ||

ಸುರಗಿ ಸಬಳ ಮುಸುಂಡಿ ಮೊದಲಾ |
ಗುರುತರದ ಕೈದುಗಳ ಪಟುಭಟ |
ರುರವಣಿಸಿ ತಾಗಿದರು ರಿಪುಮೋಹರವನನುಗೊಳಿಸಿ || ೨೩

ಹೊಕ್ಕರಾಹವದೊಳಗೆ ಮೊನೆಯಾ |
ಳಿಕ್ಕಲಿಸಿ ಬರೆ ಕಂಡು ಮಝರೇ |
ಚುಕ್ಕೆಗಳಲಾ ಎನುತ ಹೊಯ್ದರು ಬೆರಸಿ ಪಟುಭಟರ ||

ಇಕ್ಕಿದರು ಸುರಗಿಯಲಿ ಕರಿಗಳ |
ತಿಕ್ಕಿ ತಿವಿದರು ತೇರುಗಳ ಮುರಿ |
ದಿಕ್ಕಿ ಪರಿಘದೊಳೊರಸಿದರು ಕಾಲಾಳು ಮೂದಲಿಸಿ || ೨೪

ಇಟ್ಟಣಿಸಿ ಬಹ ತೇಜಿಗಳ ನೆರೆ |
ತಟ್ಟುಖಂಡಿಸಿ ಸುಭಟರನು ಬೆ |
ನ್ನಟ್ಟಿ ತಿವಿವರು ಮನ್ನಿಯರು ಹದವಱಿದು ನಾಯಕರ ||
ಹೊಟ್ಟುಗುಟ್ಟಿದರರುಣಜಲ ಸಾ |
ಲಿಟ್ಟುದವನಿಯೊಳಮಮ ನೆರೆ ಜಗ |
ಜಟ್ಟಿಗಳು ಕಾದಿದರು ರಣದಲಿ ಸುರರು ಬೆಱಗಾಗೆ || ೨೪

ಸಾರಥಿಗೆಯೆಚ್ಚರಿಸಿ ರಥಿಕರು |
ತೋಱಿದರು ಕೈಗುಣವ ಸರಳಿನ |
ಸಾರದಲಿ ರಿಪುಭಟರ ತಲೆಗಳ ತಱಿವರಲ್ಲಲ್ಲಿ ||
ಕಾಱಿದರು ರಕುತವನು ತೇರಿನ |
ವಾರುವಂಗಳು ಮುಗ್ಗಿದುವು ರಣ |
ಧೀರರೆಚ್ಚಾಡಿದರು ಗಾಯದೊಳೊರಳಿತುಭಯಬಲ || ೨೫

ಕೆಡೆದ ತಲೆಗಳ ಸಿಡಿದ ಹುಬ್ಬಿನ |
ಕಡಿದ ತೋಳ್ಗಳ ನೆಗ್ಗಿದೆಲುಗಳ |
ಪುಡಿದ ತಲೆಗಳ ಮಿದುಳ ಖಂಡದ ಹಱಿದ ಕರುಳುಗಳ ||
ಒಡೆದ ನೆತ್ತಿಗಳಿಂದ ರಕುತದ |
ಮಡು ಹರಿಯೆ ತರಹರಿಸಲಾಱದೆ |
ಪಡೆ ಮುರಿದು ಬರುತಿರಲು ಕಂಡನು ಖಾತಿಯಲಿ ನಳನು || ೨೬

ಕರೆದು ಸಾರಥಿಗಱುಹಿದನು ಪು |
ಷ್ಕರನ ಬಲ ಕೈಮಿಱಿ ಬರುತಿದೆ |
ತಿರುಹು ತೇಜಿಯನಿತ್ತಲಿವದಿರನೊಱಸಿ ಬೆನ್ನಿನಲಿ ||
ಕರುಳ ತೆಗೆವೆನುಯೆನುತ ಚಾಪಕೆ |
ತಿರುವನೇಱಿಸಿ ಸರಳಿನಲಿ ಬೊ |
ಬ್ಬಿರಿಯೆ ಧರೆ ತಲ್ಲಣಿಸಿತವನೀಪಾಲ ಕೇಳೆಂದ || ೨೭

ಮುರಿದ ಬಲ ಸಂವರಿಸಿಕೊಂಡುದು |
ಮೊರೆದ ಕಹಳಾರವದ ಸನ್ನೆಯೊ |
ಳುರುಬಿತಾಬಲದೊಳಗೆ ಬೆರಸಿತು ನಳನ ಪರಿವಾರ ||

ಅರಸನಾಸಮಯದಲಿ ಹೊಡಿನ |
ಸರಳ ಕೆನ್ನೆಗೆ ಸೇದಿ ಬಿಡೆ ಕ |
ತ್ತರಿಸಿ ಬಿಸುಟುದು ರಿಪುನೃಪರ ಶಿರಗಳನು ಖಂಡಿಸುತ || ೨೯
ಇಳೆ ಸರಳಮಯವಾಯ್ತು ಕೆಂಡವ |
ಮಳೆಗಱೆದುದೆನೆ ಪುಷ್ಕರನ ಬಲ |
ದೊಳಗೆ ಬಿದ್ದುದನೇಕರಿಪುನೃಪಸೈನ್ಯಸಾಗರವು ||
ಮಲೆತವರ ಶಿರಗಳನು ಖಂಡಿಸಿ |
ತಲೆಯ ಸೆಂಡಾಡಿದನು ರಥಿಕರ |
ಬಲುಗುಮರೆ ಕಾಲಾಳು ನೆಗ್ಗಿತು ನಳನ ಶರಪತಿಗೆ || ೩೦
ತೆಱಪುಗೊಟ್ಟೊಳಪೊಗಿಸಿ ಸವೆದನು |
ಬಱಸಿಡಲು ಬಡಿವಂತೆ ರಿಪುಬಲ |
ಮುರಿದು ನಿಂದುದು ಗಾಯವಡೆದರು ವೀರಪಟುಭಟರು ||
ಹುರಿಯೊಡೆದು ಮೈದೆಗೆದು ಸಲೆ ಕೈ |
ಮಱೆದು ಕೈದುವ ಬಿಸುಟು ಪಡೆವೊಗ |
ದಿರುಪಲೆಚ್ಚನು ಕೊಚ್ಚಿದನು ಪುಷ್ಕರನ ಚತುರ್ಬಲವ || ೩೧
ಗಾಳಿ ಮುರಿವಾಕಿವರೆ ಘನವೋ |
ಘಾಳಿ ನಿಲುವುದೆ ನಿಷಧಪತಿಶರ |
ಜಾಳದಲಿ ಕಡಿವಡೆದು ಬಿದ್ದರು ರಾಯರಾವುತರು ||
ಆಳು ಮುರಿದುದು ಖಂಡಮುಖದಲಿ |
ಹೇಳಲೇನವನವರ ವಿಧಿಯನು |
ಸೋಲದಲಿ ಮನಗುಂದಿ ಹಾಯ್ದರು ಬಿಟ್ಟ ಮಂಡೆಯಲಿ || ೩೨
ಅಱುಸಾವಿರ ತೇರು ಹಯ ಹದಿ |
ನಾಱು ಸಾಸಿರ ಕರಿಗಳಿಪ್ಪ |
ತ್ತಾಱು ಸಾಸಿರ ಸೂರಕಾಲಾಳೊಂದು ಲಕ್ಷದಲಿ |
ಸೇಱಿತಂತಕಪುರಿಗೆ ಸರಳಿನ |
ಸಾರದಲಿ ರಿಪುಸೇನೆ ಮಡಿದುವ |
ದಾರು ಬಲ್ಲರು ಮಿಕ್ಕ ಸೇನೆಯನರಸ ಕೇಳೆಂದ || ೩೩

ಮರನ ಹುತ್ತವನೇರಿದರು ಸಂ |
ಗರದಿ ಕೈದುವನಿಳುಹಿ ಸಲೆ ಮೈ |
ಮುರಿದು ತೇಜಿಯನಿಳಿದು ರಾವ್ತರು ಕೊರಳ ಸಲಹೆನುತ ||
ಕರವ ಮುಗಿದರು ಜೋಧರರು ಕೈ |
ಮುರಿದು ಕಣದಲಿ ಗಾಯದಲಿ ನೊಂ |
ದೊರಲಿ ಬಾಯಿಲಿ ಬೆರಳನಿಟ್ಟುದು ವೈರಿಪಾಯದಳ || ೨೪

ಮುರಿದು ಬರುತಿದೆ ಜೇಯ ಬಲ ನಿಲ |
ಲರಿದು ನಮ್ಮದು ನಳನೃಪಾಲನ |
ಶರಹತಿಗೆ ನೆರೆಮುಗ್ಗಿ ಕೆಡೆದುದು ತಾಱುತಟ್ಟಸಲಿ ||
ತರಹರವ ನಾ ಕಾಣೆನೀವೋ |
ಹರಕೆ ಗತಿಯೇನೆನಲು ಪುಷ್ಕರ |
ಭರದಿ ಕೋಪದೊಳಂದು ಕರೆಸಿದನಾಗ ನಿಜಬಲವ || ೨೫

ಅರಸ ಕೇಳರಮನೆಗೆ ಬಂದನು |
ವುರುತರದ ಕೈದುಗಳ ತರಿಸಿಯೆ |
ಧುರವಿಜಯರಿಗೆ ಕರೆಸಿಕೊಟ್ಟನು ಚಾಪಮಾರ್ಗಣವ ||
ಕರಿ ತುರಗ ಕಾಲಾಳು ನೆರೆದುದು |
ಮೊರೆವ ವಾದ್ಯದ ರಭಸದಲಿ ಸಂ |
ಗರಕೆ ಪಯಣವ ಮಾಡುತಿರ್ದನು ನೃಪತಿ ಕೇಳೆಂದ || ೨೬

ತೆಗೆದು ಹಿಂದಕೆ ನಿಷಧಪತಿ ಕಾ |
ಳಗದಿ ಹಿಡಿಸಿದ ಧರ್ಮಗಹಳೆಯ |
ವಿಗಡಪುಷ್ಕರನಿತ್ತ ಕೋಪಾಗ್ನಿಯಲಿ ಖತಿ ಮಸಗಿ ||
ಹಗೆಗೆ ಜಯವಾಯಿತ್ತಿಂದಿನಲಿ ತಾ |
ಹೊಗುವೆನಹಿತರ ಮುರಿವೆನೆನೆ ಕೈ |
ಮುಗಿದು ಬಿನ್ನೈಸಿದನು ವರಮಂತ್ರೀಶ ಪುಷ್ಕರಗೆ || ೨೭

ಅರಿಭಯಂಕರ ನೈಷಧನ ಸಂ |
ಗರದಿ ಗೆಲುವವರಾರು ದೇವಾ |
ಸುರರು ನಿಲಲರಿದರಸ ಮಿಕ್ಕಿನ ನರರ ಪಾಡೇನು ||

ಮರುಳುತನ ಬೇಡಿನ್ನು ನೃಪನನು |
ಕರೆಸಿ ಸಂಧಿಯಮಾಡಿ ಜೂಜಿನ |
ಪರಮಪಂಥದಿ ಗೆಲುವುದುಚಿತವಿಗೆಂದನಾಮಂತ್ರಿ || ೩೮
ವೀರಸೇನನ ತನಯ ನಿಷಧನ |
ಸೇರಿಹಳು ಜಯಲಕ್ಷ್ಮಿ ಸೇನಾ |
ಭಾರದಲಿ ಋತುಪರ್ಣಚೈದ್ಯವಿದರ್ಭ ಮೊದಲಾದ ||
ಭೂರಿನೃಪರೋಲೈಸುತಿರೆ ಸರಿ |
ಯಾರು ಸಂಗ್ರಾಮದಲಿ ನಳನಲಿ |
ಮೀಱಿ ಕೈಮಾಡಿದರೆ ತಪ್ಪದು ಮರಣ ನಿನಗೆಂದ || ೩೯
ಎನಲು ಕೇಳಾಮಾತಿನಲಿ ಬಂ |
ದನು ನಳನ ಕಂಡನು ಮಹೀಪತಿ |
ಯೆನಗೆ ನಿಮ್ಮಲಿ ಕದನವೇತಕೆ ಸಾಕದಂತಿರಲಿ ||
ಜನಪತಿಗಳೀಕ್ಷಿಸಲಿ ಮಹಾಜೂ |
ಜಿನಲಿ ನಿಪುಣರು ನಾವು ನಿಮ್ಮಲಿ |
ಮನಕೆ ಹರುಷಿತವಾಗಲಾಡುವೆನೆಂದ ನಸುನಗುತ || ೪೦
ಎಲವೊ ಕೇಳಿನ್ನಾದುದಾಗಲಿ |
ಕಲಹಕಂಜುವೆ ನೀನು ಜೂಜಿನ |
ಬಳಕೆಯಲಿ ಬಲ್ಲಿದನು ನಮ್ಮನು ಕರೆದೆ ತಪ್ಪೇನು ||
ಕಲಹವಾಗಲಿ ಜೂಜದಾಗಲಿ |
ಗೆಲುವೆ ನಿನ್ನನು ಕುಟಿಲಹೃದಯದ |
ನೆಲೆಯ ಬಲ್ಲೆನು ನಿನಗೆ ಮನವೊಲಿದುದನು ಮಾಡೆಂದ || ೪೧
ಅರಸ ಕೇಳಾಪುಷ್ಕರನು ತ |
ನ್ನರಮನೆಗೆ ಕರೆತಂದನಾಕಲಿ |
ಪುರುಷನಿಂದಲಿ ಮುನ್ನ ಗೆಲಿದಗ್ಗಳಿಕೆಯಲಿ ನೃಪನ ||
ಹಿರಿದು ತಾ ಗೆಲಬಲ್ಲೆನೆಂದಾ |
ಪ್ತರನು ಕರೆಸಿದನೋಲಗದಿ ಕು |
ಳ್ಳಿರಲು ತಂದರು ಸಾರಿಗಳ ನಿಲಿಸಿದರು ಸಮ್ಮುಖದಿ || ೪೨

ನಳನೃಪತಿ ನೀ ಗೆಲಿದೊಡೀ |
ಭೂಲಲನೆಯನು ತಾ ಬಿಡುವೆ ಸೋತರೆ |
ಬಳಿಕ ದಮಯಂತಿಯನು ನನಗೊಪ್ಪಿಸುವುದೆಂದೆನಲು ||
ಇಳೆಯೊಳಿಪ ಭೂರುಹದ ಹೃದಯದ |
ನೆಲೆಯ ಬಲ್ಲಗ್ಗಳಿಕೆಯಲಿ ತಾ |
ಗೆಲುವೆನೆಂದೊಪ್ಪಿದನು ಮನದಲಿ ಧೈರ್ಯಪರನಾಗಿ || ೪೨

ಹೂಡಿದರು ಸಾರಿಗಳ ನೆತ್ತವ |
ನಾಡಿದರು ಮನವೊಲಿದು ಖಾಡಾ |
ಖಾಡಿಯಲಿ ದುಗಬಾರಯಿತ್ತಿಗವೆಂಬ ಹರುಷದಲಿ ||
ಬೇಡಿದರೆ ಬೀಳುವುದು ದಾಯದ |
ರೂಢಿ ಜಳುಪಿಸೆ ಹೊಳೆವ ದಾಳದ |
ರೂಢಿಗಚ್ಚರಿಯಾಗೆ ನಳನೃಪ ಗೆಲಿದು ಬೊಬ್ಬಿರಿದ || ೪೪

ಖಿನ್ನನಾದನು ಪುಷ್ಕರನು ಹರು |
ಷೋನ್ನತಿಯು ಬೀಳ್ಕೊಡಲು ಗುಣಸಂ |
ಪನ್ನನೇಱಿದ ರತ್ನಸಿಂಹಾಸನವ ನಳನೃಪತಿ ||
ಪನ್ನಗಾರಿಧ್ವಜನ ಕೃಪೆ ನಿನ |
ಗಿನ್ನು ಸಿದ್ಧಿಸಲೆಂದು ಮುನಿಜನ |
ರುನ್ನತದಿ ಕೊಂಡಾಡಿ ಹರಸಿದರಲ್ಲಿ ಧರಣಿಪನ || ೪೫

ದೇವದುಂದುಭಿ ಮೊಳಗಿದುದು ದಿವಿ |
ಜಾವಳಿಗಳಭ್ರದಲಿ ಸಂಧಿಸಿ |
ಹೂವಿನಲಿ ಮಳೆಗಱೆದರಾಗ ನೃಪಾಲನಂಗದಲಿ ||
ಕೋವಿದರು ಸುಜನಾವನೀಶರು |
ಸೇವಿಸಲು ಧರೆ ನಲಿಯೆ ನೃಪ ರಾ |
ಜೀವಲೋಚನನಂತೆ ಸಿಂಹಾಸನದಿ ರಂಜಿಸಿದ || ೪೬

ಬಂದು ಕಂಡರು ಪುರಜನರು ನಲ |
ವಿಂದ ಕಾಣಿಕೆಗೊಟ್ಟು ಸುರಕುಲ |
ವೃಂದದಲಿ ನಲಿಯಲು ಮಂತ್ರಿ ಬಾಂಧವರೆಲ್ಲ ಕೈಮುಗಿದು ||

ಕನಕರತ್ನಪ್ರಭೆಯ ಸಿಂಹಾ |
ಸನದೊಳೊಪ್ಪಿದನುಭಯಪಾರ್ಶ್ವದಿ |
ವನಿತೆಯರು ಚಿಮ್ಮಿದರು ಸಿತಚಾಮರವನಾನೃಪಗೆ ||
ಜನಪತಿಗಳಿಕ್ಕೆಲದಲಿ ಮಂತ್ರಿ |
ಜನಪುರೋಹಿತನುಲ್ಲಗಾಯಕ |
ವನಿತೆಯರ ಗಡಣದಲಿ ಮೆರೆದುದು ನೃಪತಿಯಾಸ್ಥಾನ || ೨೯೧

ಚಿಂತೆ ಬಲಿದು ವಿದರ್ಭದಲಿ ದಮ |
ಯಂತಿ ಕೇಳಿದಳೊಡನೆ ಸುದ್ದಿಯನು |
ಪಂತದಲಿ ಪುಷ್ಕರನ ಗೆಲಿದನೊ ನೋತನೋ ನೃಪತಿ ||
ಕಂತುಪಿತನ ಕೃಪಾವಲೋಕನ |
ದಿಂತಿದುದೊ ತನಗೆಂಬ ಸಮಯದ |
ಲಂತರಿಸದೈತಂದರಲ್ಲಿಗೆ ನಳನ ಮಂತ್ರಿಗಳು || ೨೯೨

ತಾಯೆ ಬಿನ್ನಪವಿಂದು ನಮ್ಮನು |
ರಾಯನಟ್ಟಿದ ನಿಮ್ಮ ಬಳಿಗೆ ನಿ |
ರಾಯಸದಿ ಪುಷ್ಕರನ ಗೆಲಿದನು ಸಕಲ ರಾಜ್ಯವನು ||
ನ್ಯಾಯದಲಿ ಕೈಕೊಂಡು ನಿಮ್ಮನು |
ಪ್ರಿಯದಿಂ ಬರಹೇಳಿದನು ಕಮ |
ಲಾಯತಾಂಬಕಿ ಬಿಜಯಮಾಡೆಂದೆರಗಿದರು ಪದಕೆ | ೨೯೩

ಕೇಳಿ ಹರುಷಿತೆಯಾದಳವರಿಗೆ |
ಪಾಲಿಸಿದಳಾಭರಣ ವಸ್ತ್ರವ |
ಲೋಲಲೋಚನೆ ಬಂದು ತಂದೆಗೆ ನಮಿಸಿ ವಿನಯದಲಿ ||
ನಾಳೆ ಪಯಣವ ಮಾಡಿ ನಿಷಧನೃ |
ಪಾಲನಲ್ಲಿಗೆ ತನ್ನ ಕಳುಹೆನೆ |
ಬಾಲಕಿಯ ನುಡಿಗೇಳಿ ತೆಗೆಸಿದನು ಭೀಮನೃಪ || ೨೯೪

ತೆಗೆಸಿದನು ಭಂಡಾರದಲಿ ಬಗೆ |
ಬಗೆಯ ವಸ್ತ್ರವ ಸುಭಟರಿಗೆ ಝಗ |
ಝಗಿಪ ಹೊನ್ನಾಯುಧವ ನವರತ್ನಗಳ ತೊಡಿಗೆಗಳ ||

ಸುಗುಣೆಯರು ಮೊದಲಾದ ಪರಿವಾ |
ರಗಳಿಗಿತ್ತನು ಪಯಣವಲಿ ತೇಂ |
ರುಗಳ ಶೃಂಗರಿಸಿದರು ಬಿರುದಿನ ಸಿಂಧಗಳ ನೆಗಹಿ || ೩೬
ಬಿಗುಹನೇರಿಸಿ ಹಯಗಳನು ಜೋಂ |
ಡೆಗಳ ಹವಿಕ್ರದರಾನೆಯಲಿ ಸ |
ತ್ತಿಗೆಗಳನು ಪಲ್ಲೈಸಿದರು ಮೇಳೈಸಿದ ಕಳಶದಲಿ ||
ಸೊಗಸುದೋರುವ ಭಟರ ನೆರೆ ಕೈ |
ದುಗಳ ಪೊಳೆಯಿಸ ನೃಪರ ಬಳಿಯಲಿ |
ನೆಗಹಿ ಬೀಸುವ ಚೌರಿಗಳ ಸಂಭ್ರಮದೊಳೊದಗಿದರು || ೩೭
ಮಣಿರಥಂಗಳ ನಡುವೆ ಸುಳಿವಂ |
ದಣದ ರಾಯರ ಮಧ್ಯದಲಿಯುರ |
ವಣಿಪ ಮತ್ತಗಜಂಗಳಲಿ ಮಾವೃತರ ಕಳಕಳದ ||
ಕುಣಿವ ತೇಜಿಯ ರಾವುತರ ಸಂ |
ದಣಿಗಳಲಿ ಚತುರಂಗಬಲವಿ |
ಟ್ಟಣಿಸಿ ನಡೆದುದು ಸಾಲುಸತ್ತಿಗೆಗಳ ವಿಡಾಯಿಯಲಿ || ೩೮
ನಾರಿಯರ ಸಂದಣಿಯು ನೆರೆದುದು |
ತೇರಿನಲಿ ಕೆಲರಂದಣದಿ ಕೆಲ |
ರೇರಿದರು ವಾಜಿಗಳ ಗಜಕಂಧರದ ಗದ್ದುಗೆಯ ||
ಸೇರಿ ನಡೆದರು ಮುಂದೆ ಘನಗಂ |
ಭೀರಭೇರೀನಿಸ್ಸಾಣದ ವಾದ್ಯವ್ರ |
ಭೋರಿಡಲು ಹೊಳೆಯಂಬಳಂಗನೆ ಸಕಲ ವಿಭವದಲಿ || ೩೯
ಬಂದಳಾದಮಯಂತಿ ದೇವನು |
ಕುಂದ ರಕ್ಷಿಸುಯೆಸುತ ತನ್ನಯ |
ನಂದನರ ಸಹಿತೇರಿದಳು ಮಣಿಮಯವರೂಥವನು ||
ಹಿಂದೆ ಮುಂದಿಕ್ಕೆಲದ ನಾರೀ |
ವೃಂದ ನಡೆಯಲು ಮನದ ಹರ್ಷಾ |
ನಂದದಲಿ ನಡೆತಂದು ಹೊಕ್ಕಳು ನಿಷಧಪಟ್ಟಣವ || ೪೦

ನೋಡುತಿರ್ದರು ಪುರಜನರು ನೆಲೆ |
ಮಾಡಮುಪ್ಪರಿಗೆಯಲಿ ಮಿಗೆ ಕರು |
ವಾಡವೆಡೆಯಲಿ ಸೌಧಗಳ ಜಾಲಂಧ್ರಶಿಖರದಲಿ ||
ನೋಡುವರ ತಾ ನೋಡಿ ನಸುನಗು |
ತಾಡುವರ ನೃತ್ಯದಲಿ ಗಾನವ |
ಪಾಡುವರ ಕಂಡಲ್ಲಿ ನಲಿಯುತ ಬಂದಳರಮನೆಗೆ || ೬೧

ಬಾಗಿಲಲಿ ರಥವಿಳಿಯೆ ಸತಿಗೆ ಸ |
ರಾಗದಿಂ ಪಣ್ಯಾಂಗನೆಯರು |
ದ್ಯೋಗಿಸಿದರಾರತಿಯನೆತ್ತಿದರತುಳವಿಭವದಲಿ ||
ಭೋಗಿಶಯನನ ಕರುಣ ನಿಮಗುಂ |
ಟಾಗಿ ಸುಖಿಯಾಗೆಂದು ಹರಸಿದ |
ರಾಗ ಮುನಿನಿಕುರುಂಬವಸ್ತುತಿವಳಿವರಂಗನೆಗೆ || ೬೨

ಪರಕೆಗಳ ಕೈಕೊಳುತ ಸತಿ ಬಂ |
ದರಮನೆಯ ಹೊಕ್ಕಳು ನೃಪಾಲನ |
ಚರಣಕಮಲಕೆ ನಮಿಸಿ ಪಡೆದಳು ಪತಿಯ ಚಿತ್ತವನು ||
ಅರಸ ಕೇಳ್ಯೆ ನಿಷಧಪತಿ ನಿಜ |
ತರುಣಿ ಸುತರೊಡಗೂಡಿ ಮಂಗಳ |
ಕರದೊಳೊಪ್ಪಿದ ಸಕಲ ದೇಶಾಮರರು ನಲಿದಾಡೆ || ೬೩

ಪರಮಪುಣ್ಯೋದಯನು ಸದ್ಗುಣ |
ಭರಿತ ಸತ್ಯಸುಭಾಷಿತನು ಸಂ |
ಗರಸುಧೈರ್ಯನು ನಿತ್ಯನಿರ್ಮಲ ನಿಗಮಕೋವಿದನು ||
ಅರಸುಕುಲಪಾವನನು ನಳಭೂ |
ವರನು ಸಿಂಹಾಸನದಿ ರಂಜಿಸಿ |
ಧರೆಯನಾಳಿದ ವರಪುರದ ಚೆನ್ನಿಗನ ಕರುಣದಲಿ || ೬೪

ಮುನಿಕುಲಾಂಬುಧಿಚಂದ್ರ ರೋಮಶ |
ಮುನಿಪ ವಿಸ್ತರಿಸಿದನು ನಳಭೂ |
ಪನ ಚರಿತ್ರೆಯ ಕೇಳಿ ತಲೆದೂಗಿದನು ಯಮಸೂನು ||

ಮನಕೆ ಹರುಷಾನಂದವಾಯ್ತೆಲೆ |
ಮುನಿಪ ನಿಮ್ಮಡಿ ಕರುಣದಲಿಯಿಂ |
ದೆನಗೆ ಫಲಿಸಿತು ಪುಣ್ಯವೆಂದೆಱಗಿದನು ಚರಣದಲಿ || ೬೫

ದೇವಮುನಿಗಳು ನೀವು ನಮ್ಮನು |
ಪಾವನರ ಮಾಡಿದಿರಿ ನಮಗಿ |
ನ್ನಾವುದರಿಂದುಂಟೆನ್ನ ಪಾರ್ಥನ ದನಸನೇನಱಿಯೆ ||
ಆವಿವರವೆನಗಿನ್ನು ತಿಳುಹೆನೆ |
ದೇವನಗರಿಯೊಳಿಂದ್ರನಲಿ ಗಾಂ |
ಡೀವಿ ಸುಸ್ಥಿರನರಸ ಚಿಂತಿಸಬೇಡ ನೀನೆಂದ || ೬೬

ಎಲೆ ಯುಧಿಷ್ಠಿರ ಕೇಳು ಲೋಕದ |
ಲಲನೆಯರ ಪರಿಯಲ್ಲ ನಾಲ್ವರು |
ಚೆಲುವೆಯರು ಗುಣಶೀಲಸಂಪನ್ನೆಯರು ಚತುರೆಯರು ||
ನಳಿನಮುಖಿ ದಮಯಂತಿ ಸೀತಾ |
ಲಲನೆ ದ್ರೌಪದಿ ಚಂದ್ರಮತಿಕೋಂ |
ಮಲೆಯುರಚ್ಚ್ರತನುಚ್ಚ ಮೆಚ್ಚಿ ನರಾಜನನಿತೆಯರು || ೬೭

ನಿನಗೆ ಪಟ್ಟದ ಮಹಿಷಿ ದ್ರೌಪದಿ |
ವನಿತೆಯಿರೆ ಸಾಮ್ರಾಜ್ಯಸಂಪದ |
ವಿನಿತು ಸತಿಯಿಂದಾಗುವುದು ಕಾರ್ಯಗಳು ಸಿದ್ಧಿಪುವು ||
ಜನಪ ಚಿಂತಿಸಬೇಡ ನಾಳಿನ |
ದಿನದಿ ಬಹ ನಿನ್ನನುಜನರ್ಜುನ |
ಮನದ ಚಿಂತೆಯ ಬೀಳುಕೊಡು ಸುಖಿಯಾಗು ನೀನೆಂದ || ೬೮

ಹರನು ನಿಮಗೆ ಸಹಾಯ ದೇವಾ |
ಸುರರು ನಿಮಗೊಲ್ಲಿದರು ಲಕ್ಷ್ಮೀ |
ವರನು ನಿಮಗಿನ್ನಂತರಂಗದ ಪರಮಸುಖವೆಸಗಿರಲು ||
ಮುಖಗಳೇಕಿನ್ನಾವುದರಿಂದೆಲೆ |
ಧರಣಿಪತಿ ನಾಕಿನ್ನು ರಾಜ್ಯದ |
ಸಿರಿ ನಿನಗೆ ಬಂದಪುದು ರಿಪುಸಂಹಾರವಹುದೆಂದ || ೬೯

ಎಂದು ಬುದ್ಧಿಯ ಪೇಳಿ ಮುನಿ ಯಮ |
ನಂದನನ ಬೀಳ್ಕೊಂಡು ತಾಪಸ |
ವೃಂದಸಹಿತಲ್ಲಿಂದ ಹೊಱವಂಟನು ನಿಜಾಶ್ರಮಕೆ ||
ಅಂದು ಯಮಳರು ಧೌಮ್ಯ ದ್ರೌಪದಿ |
ಸಂದ ಮುನಿಜನಸಹಿತ ಯಮಸುತ |
ಬಂದು ಹೊಕ್ಕನು ಪರ್ಣಶಾಲೆಯನಧಿಕಹರುಷದಲಿ ||

ಈ ಕಥೆಯನಾಲಿಸುವಸುಜನರಿಗ |
ನೇಕಸುಖಸಾಂಬ್ರಾಜ್ಯಪದವಿಯು |
ನಾಕಮುಲಲೋಕನನು ವರಪುರದರಸ ಪಾಲಿಸುವ ||
ಲೋಕಪಾವನ ನಳನ ಕಥೆಯ ನಿ |
ರಾಕರಿಸಿದವರಧಿಕನರಕದ |
ಲೋಕವಾಳುವರೆಂದು ರೋಮಶ ನುಡಿದನರಸಂಗೆ ||

ಮೇದಿನಿಯೊಳೀಪುಣ್ಯಚರಿತೆಯ |
ನಾದರಿಸಿ ಬರೆದೋದಿ ಕೇಳುವ |
ಸಾಧುಸಜ್ಜನರಾದವರಿಗಮುದಖಿಳಕೈವಲ್ಯ ||
ವೇದಗೋಚರ ಕೃಷ್ಣ ವರಪುರ |
ದಾದಿಕೇಶವನಮರವಂದಿತ |
ನಾದಿನಾರಾಯಣನು ಸಲಹುವನಖಿಳಸಜ್ಜನರ ||

ಒಂಬತ್ತನೆಯ ಸಂಧಿ ಮುಗಿದುದು.

ನಳಚರಿತ್ರ ಸಂಪೂರ್ಣಂ.

ಮಂಗಳಮಸ್ತು.